ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಕೆ. ಟಿ. ಭಾಷ್ಯಂ



ಪ್ರಕಟಣೆ :

**ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,**

ಕರ್ನಾಟಕ ವಿಧಾನ ಸಭೆ ಸಚಿವಾಲಯ,

ವಿಧಾನಸೌಧ, ಬೆಂಗಳೂರು - 560 001

ಪ್ರತಿಭಾವಂತ ಸಂಸದೀಯ ಪಟುಗಳ
ಬದುಕು ಬರಹ ಮಾಲಿಕೆ

# ಕೆ. ಟಿ. ಭಾಷ್ಯಂ

Eminent Parliamentarian Series

# K. T. BHASHYAM



ರಚನೆ
ಡಾ|| ವಿಘ್ನೇಶ್ ಎನ್. ಭಟ್,
ಪ್ರಾಧ್ಯಾಪಕರು,
ಕುವೆಂಪು ವಿಶ್ವವಿದ್ಯಾನಿಲಯ

ಮೊದಲ ಮುದ್ರಣ
ಏಪ್ರಿಲ್, 2000 - 1,000 ಪ್ರತಿಗಳು

ಪ್ರಕಟಣೆ
ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು - 560 001.

# ಮುನ್ನುಡಿ

ಕರ್ನಾಟಕ ರಾಜ್ಯದ ವಿಧಾನಸಭೆಯ ಗ್ರಂಥಾಲಯ ಸಂಶೋಧನಾ ವಿಭಾಗವು ಶ್ರೀ ಕೆ. ಟಿ. ಭಾಷ್ಯಂ ಅವರನ್ನು ಕುರಿತು ಗ್ರಂಥವೊಂದನ್ನು ಬರೆಯಲು ಕೇಳಿದಾಗ ನಾನು ಅತ್ಯಂತ ಪ್ರೀತಿ ಗೌರವಗಳಿಂದ ಈ ಕೆಲಸವನ್ನು ಒಪ್ಪಿಕೊಂಡೆ. ಕಾರಣವಿಷ್ಟೇ: ಶ್ರೀ ಭಾಷ್ಯಂ ಅವರ ಹೆಸರನ್ನು ನಾನು ಓದಿ, ಕೇಳಿ ತಿಳಿದಿದ್ದೆ. ಅವರ ಆದರ್ಶಮಯ ಜೀವನ, ರಾಜಕೀಯದಲ್ಲಿ ಹೋರಾಟದ ಮನೋಭಾವ, ಪ್ರಚಂಡ ಮಾತುಗಾರಿಕೆ, ಸರಳ ಸಜ್ಜನಿಕೆಯ ವ್ಯಕ್ತಿತ್ವಗಳು ನನಗೆ ದಂತಕಥೆಯಂತೆ ಅನಿಸಿದ್ದವು. ಅದರಿಂದಲೇ ರಾಜ್ಯ ಸರ್ಕಾರದಿಂದ ಈ ಆಮಂತ್ರಣ ಬಂದಕೂಡಲೆ ಒಪ್ಪಿಕೊಂಡು ಈ ಗ್ರಂಥ ರಚನೆಗೆ ಕೈಹಾಕಿದ್ದು.

ಶ್ರೀ ಭಾಷ್ಯಂ ಅವರ ಕುರಿತು ಇಂದು ಜೀವಿಸಿರುವ ಕರ್ನಾಟಕದ ಅನೇಕ ಸ್ವಾತಂತ್ರ್ಯ ವೀರರು ಮೌಖಿಕವಾಗಿ ಹೇಳುತ್ತಾರೆಯೇ ವಿನಃ ಲಿಖಿತ ರೂಪದಲ್ಲಿ ಹೆಚ್ಚಿಗೆಯೇನೂ ಲಭ್ಯವಿಲ್ಲ. ಮೈಸೂರು ರಾಜ್ಯವು ತುಸು ರಾಜಕೀಯ ಪ್ರೌಢಾವಸ್ಥೆಯ ಹಂತಕ್ಕೆ ತಲುಪುವಷ್ಟರಲ್ಲಿ ಭಾಷ್ಯಂ ವಿಧಾನ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಆದ್ದರಿಂದ ವಿಧಾನಸಭೆಯ ಅಧಿವೇಶನಗಳಲ್ಲಿ ಅವರು ಮಾಡಿದ ಭಾಷಣಗಳೂ ಹೆಚ್ಚಿನ ಸಂಖ್ಯೆಯಲ್ಲಿ ಉಪಲಬ್ಧವಿಲ್ಲ. ಆದಕಾರಣ ನಿಖರವಾದ ವಿಷಯ ಸಂಗ್ರಹಣೆಗೆ ಭಾಷ್ಯಂ ಅವರ ನಿಕಟವರ್ತಿಗಳ ಸಂದರ್ಶನ ಅತಿ ಅಗತ್ಯವಾಯಿತು. ಈ ಪುಸ್ತಕ ಬರೆಯುವ ಸಂದರ್ಭದಲ್ಲಿ ಕೆ. ಟಿ. ಭಾಷ್ಯಂ ಅವರ ಕುರಿತಾದ ವಿಷಯ ದೊರಕಿಸಿಕೊಳ್ಳಲು ಪ್ರಾಥಮಿಕ ಹಾಗೂ ಅನುಷಂಗಿಕ ಮಾಹಿತಿಗಳ ಸಂಗ್ರಹಕ್ಕಾಗಿ ಅನೇಕ ರಾಜಕೀಯ-ಸಾಮಾಜಿಕ ಹಿರಿಯರನ್ನು ನಾನು ಸಂಪರ್ಕಿಸಿ ಸಂದರ್ಶಿಸಿದೆ. ಸಂದರ್ಶಿತರಲ್ಲಿ ಪ್ರಮುಖರೆಂದರೆ ಶ್ರೀ ಎಂ. ಎನ್. ಜೋಯಿಸ್, ಮೈಸೂರು; ಶ್ರೀ ರಾಮಣ್ಣ, ಮೈಸೂರು; ಶ್ರೀ ಜೆ. ಲಿಂಗಯ್ಯ, ಬೆಂಗಳೂರು; ಶ್ರೀ ಎಚ್.ಎಸ್. ದೊರೆಸ್ವಾಮಿ, ಬೆಂಗಳೂರು; ಶ್ರೀ ಜವರಪ್ಪ ಗೌಡರು, ಮಂಡ್ಯ; ಶ್ರೀ ರಾಜಗೋಪಾಲ್ ಗಿರಿಮಾಜಿ, ಶಿವಮೊಗ್ಗ, ಮುಂತಾದವರು. ಸನ್ಮಾನ್ಯ ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರ ಅಭಿಪ್ರಾಯಗಳನ್ನು ಪುಸ್ತಕಕ್ಕೆ ಅವರು ಬರೆದ ಮುನ್ನುಡಿಯಿಂದ ಎತ್ತಿಕೊಂಡಿದ್ದೇನೆ. ಭಾಷ್ಯಂ ಕುರಿತಾದ ಸಾಕಷ್ಟು ಮಾಹಿತಿಯನ್ನು ಈ ಎಲ್ಲ ಸ್ವಾತಂತ್ರ್ಯ ಯೋಧರೂ ದೊರಕಿಸಿಕೊಟ್ಟಿದ್ದಾರೆ. ಇವರಲ್ಲಿ ಪ್ರತಿಯೊಬ್ಬ ಹಿರಿಯರಿಗೂ ನಾನು ಗೌರವಪೂರ್ವಕ ನಮನಗಳನ್ನೂ, ಹೃದಯದುಂಬಿದ ಕೃತಜ್ಞತೆಗಳನ್ನೂ ಅರ್ಪಿಸುತ್ತೇನೆ. ಇವರೆಲ್ಲರ ಕಿರಿದಾದ ಪರಿಚಯವನ್ನೂ, ಅವರು ಭಾಷ್ಯಂ ಕುರಿತು ಹೇಳಿದ ಮಾತುಗಳನ್ನೂ, ಹಾಗೂ ಉಲ್ಲೇಖಗಳನ್ನೂ ಯಥಾವತ್ತಾಗಿ ಓದುಗರಿಗೆ ಕೊಡಲಾಗಿದೆ. ಹಾಗೆಯೇ ಈ ಪುಸ್ತಕದಲ್ಲಿ ಬಳಸಿದ ಉಳಿದ ದಾಖಲೆಗಳ ಗ್ರಂಥಋಣವನ್ನೂ ಕೊನೆಯಲ್ಲಿ ಒದಗಿಸಲಾಗಿದೆ.

ನಾನು ಮೇಲೆ ಹೇಳಿದಂತೆ ಭಾಷ್ಯಂ ಅವರು ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಇನ್ನೂ ಹೆಚ್ಚಿನ ಅವಧಿಗೆ ಬದುಕಿದ್ದು ಕನ್ನಡಜನತೆಗೆ ಅವರ ಸೇವೆ ಇನ್ನೂ ಹೆಚ್ಚು ಸಿಗಬೇಕಿತ್ತು. ಆದರೆ ದೈವದ ನಿರ್ಣಯ ಬೇರೆಯೇ ಆಗಿತ್ತು. ಭಾಷ್ಯಂ ಅವರ ಅಕಾಲಿಕ ಮರಣದಿಂದ ಕನ್ನಡ

ಜನಸ್ತೋಮ ಒಬ್ಬ ಧೀರಕುವರನನ್ನಷ್ಟೇ ಅಲ್ಲ, ಒಬ್ಬ ಧೀಮಂತ ರಾಜಕಾರಣಿಯನ್ನೂ ಕಳೆದುಕೊಂಡಿತು. ಭಾಷ್ಯಂ ಅವರ ಸ್ವಾತಂತ್ರ್ಯಾನಂತರದ ಭಾಷಣಗಳಲ್ಲಿ ಹಲವು ಅಲಭ್ಯವಾಗಿವೆ. ಅವರು ವಿಧಾನ ಪರಿಷತ್ತಿನ ಸಭಾಪತಿಗಳಾಗಿ ನೀಡಿದ ಅನೇಕ ದಿಟ್ಟ ಹಾಗೂ ಮೇಧಾವಿ 'ರೂಲಿಂಗ್' ಗಳು ವಿಧಾನ ಸೌಧದ ಗ್ರಂಥಾಲಯದಲ್ಲಿ ಉಪಲಬ್ಧವಿವೆ. ಆ ಎಲ್ಲ ದಾಖಲೆಗಳನ್ನು ಓದಿ ಉಪಯೋಗಿಸಿಕೊಳ್ಳಲು ಅನುಮತಿ ನೀಡಿ ಎಲ್ಲ ರೀತಿಯ ಸಹಕಾರ ಒದಗಿಸಿದ ವಿಧಾನಸಭೆಯ ಕಾರ್ಯದರ್ಶಿಯವರಿಗೂ, ಗ್ರಂಥಾಲಯ ಸಿಬ್ಬಂದಿಗೂ, ದಾಖಲೆ ಮತ್ತು ಕಡತ ವಿಭಾಗದ ಸಿಬ್ಬಂಧಿಗೂ ನಾನು ಋಣಿ.

ಸ್ವಾತಂತ್ರ್ಯ ಹೋರಾಟಗಾರ ದಿವಂಗತ ಶ್ರೀ ವಿ. ಎಸ್. ನಾರಾಯಣರಾವ್ ಅವರಿಂದ ಬರೆಯಲ್ಪಟ್ಟು, ಶ್ರೀ ಜೆ. ಲಿಂಗಯ್ಯ, ಸ್ವಾತಂತ್ರ್ಯ ಹೋರಾಟಗಾರರು ಮತ್ತು ಬೆಂಗಳೂರು ನಗರದ ಮಾಜಿ ನಗರಸಭಾಧ್ಯಕ್ಷರು ಇವರು ಪ್ರಕಾಶನಕ್ಕೆ ತಂದ 'ಅಪ್ರತಿಮ ರಾಷ್ಟ್ರಭಕ್ತ ಕೆ. ಟಿ. ಭಾಷ್ಯಂ ಅಯ್ಯಂಗಾರ್ (ಜೀವನ ಚರಿತ್ರೆ)' ಎಂಬ ಪುಸ್ತಕವು ನನಗೆ ತುಂಬ ಉಪಯುಕ್ತ ಆಧಾರಗ್ರಂಥವಾಯಿತು. ನಾನು ಈ ಪುಸ್ತಕದಿಂದ ಭಾಷ್ಯಂ ಅವರ ಅನೇಕ ಭಾಷಣಗಳನ್ನೂ, ಅವರ ಜೀವನಕ್ಕೆ ಸಂಬಂಧಿಸಿದ ಕೆಲವು ವಿವರಗಳನ್ನೂ ಯಥಾವತ್ತಾಗಿ ದಾಖಲಿಸಿಕೊಂಡಿದ್ದೇನೆ. ಅದಕ್ಕಾಗಿ ವಯೋವೃದ್ಧರೂ, ಜ್ಞಾನವೃದ್ಧರೂ ಆದ ಶ್ರೀ ಜೆ. ಲಿಂಗಯ್ಯನವರಿಗೆ ನನ್ನ ಗೌರವಪೂರ್ವಕ ಕೃತಜ್ಞತೆಗಳು.

ಈ ಪುಸ್ತಕ ಹೀಗೇ ರೂಪುಗೊಳ್ಳಲು ನನ್ನ ಮಡದಿ ಶ್ರೀಮತಿ ಸುಮಿತ್ರಾ ಭಟ್ ಇವಳ ಕೊಡುಗೆ ನನ್ನ ಶ್ರಮ ಹಾಗೂ ವಿಚಾರಗಳಷ್ಟೇ ಮಹತ್ವದ್ದು. ಈ ಪುಸ್ತಕದಿಂದ ಕೀರ್ತಿಶೇಷ ಭಾಷ್ಯಂ ಅವರ ಕುರಿತು ಕನ್ನಡ ಮಹಾಜನತೆಗೆ ಹೆಚ್ಚಿನ ಮಾಹಿತಿ ದೊರೆತು ಏನಾದರೂ ಲಾಭವಾದಲ್ಲಿ ಆ ಕೀರ್ತಿಯಲ್ಲಿ ಮಡದಿ 'ಸುಮ್ಮಿ'ಗೆ ಸಿಂಹಪಾಲು. ನನ್ನೊಂದಿಗೆ ಸಂಶೋಧನೆಯಲ್ಲಿ ಪಾಲ್ಗೊಂಡು, ಸಂದರ್ಶನಗಳನ್ನು ದಾಖಲಿಸಿ ಪ್ರತಿಮಾಡಿಕೊಟ್ಟ ನನ್ನ ವಿದ್ಯಾರ್ಥಿನಿ ಡಾ॥ ಎಚ್. ಎಸ್. ಕೃಪಾಲಿನಿ ಅವರನ್ನು ನಾನು ಇಲ್ಲಿ ನೆನೆಯುವುದು ಕರ್ತವ್ಯ.

ಈ ಪುಸ್ತಕದಲ್ಲಿ ಏನಾದರೂ ತಪ್ಪುಗಳು, ದೋಷಗಳು, ಹಾಗೂ ಕೊರತೆಗಳು ಉಳಿದುಕೊಂಡಿದ್ದಲ್ಲಿ ಆ ಎಲ್ಲ ದೌರ್ಬಲ್ಯಗಳಿಗೆ ನಾನೊಬ್ಬನೇ ಪೂರ್ಣ ಹೊಣೆಗಾರ. ಕರ್ನಾಟಕದ ಜನತೆ ಈ ಪುಸ್ತಕವನ್ನು ಪ್ರೀತಿಯಿಂದ ಬರಮಾಡಿಕೊಂಡು ಕನ್ನಡದ ಕೆಚ್ಚೆದೆಯ ಕುವರ ಕೆ. ಟಿ. ಭಾಷ್ಯಂ ಅವರನ್ನು ಕಣ್ಣೀರು ತುಂಬಿ ನೆನಪಿಸಿಕೊಳ್ಳುವದೆಂದು ನಾನಂದುಕೊಳ್ಳುತ್ತೇನೆ.

ವಿಘ್ನೇಶ್ ಎನ್. ಭಟ್.

ಶಿವಮೊಗ್ಗ,
ಏಪ್ರಿಲ್, ೨೦೦೦

## ಪೀಠಿಕೆ

ದೇಶದ ಸ್ವಾತಂತ್ರ್ಯ ಸುವರ್ಣ ಮಹೋತ್ಸವವನ್ನು ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದು ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರ ತಂದಿರುತ್ತಾರೆ. ಅವುಗಳಲ್ಲಿ ಡಾ॥ ಬಿ. ಆರ್. ಅಂಬೇಡ್ಕರ್ ಡಾ॥ ರಾಂ ಮನೋಹರ ಲೋಹಿಯಾ ಮತ್ತು ಶೇಕ್ ಮಹಮದ್ ಅಬ್ದುಲ್ ಮತ್ತು ಕೃಷ್ಣಮೆನನ್ ಮೊದಲಾದ ಗಣ್ಯರ ಬಗ್ಗೆ ಆಂಗ್ಲ ಭಾಷೆಯಲ್ಲಿ ಪ್ರಕಟವಾಗಿದ್ದ ಕಿರುಹೊತ್ತಿಗೆಗಳನ್ನು ನಾವು ಕನ್ನಡದಲ್ಲಿ ಹೊರ ತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇನೆ.

ಹಾಗಿದ್ದಲ್ಲಿ ಸಂಸದೀಯ ಪಟುಗಳಾಗಿದ್ದ ಅನೇಕ ಮಹನೀಯರ ಕುರಿತ ಕಿರುಹೊತ್ತಿಗೆಗಳನ್ನು ಸಿದ್ದಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕ್ಕೊಂಡಿದ್ದು ಈ ಕಾರ್ಯವನ್ನು ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ. ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯ ಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾನಿಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ವೈಕುಂಠ ಬಾಳಿಗಾನವರ ಹಾಗೂ ಇತರೆ ಸಂಸದೀಯ ಪಟುಗಳ ಪುಸ್ತಕಗಳನ್ನು ಹೊರತಲಾಗಿದೆ. ಈಗ ಶ್ರೀ ಕೆ. ಟಿ. ಭಾಷ್ಯಂ ಅವರನ್ನು ಕುರಿತು ಕುವೆಂಪು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಡಾ॥ ವಿಘ್ನೇಶ್, ಎನ್. ಭಟ್ ಅವರು ರಚಿಸಿರುವ ಕೃತಿಯನ್ನು ತಮ್ಮ ಮುಂದಿಡಲು ಹೆಮ್ಮೆಎನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಹಾಗೂ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

ಡಿ. ಬಿ. ಕಲ್ಮಣ್ಕರ್,
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಎಂ. ವಿ. ವೆಂಕಟಪ್ಪ,
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

ಪ್ರತಿಭಾವಂತ ಸಂಸದೀಯ ಪಟು

# ಕೆ. ಟಿ. ಭಾಷ್ಯಂ

## ಪರಿವಿಡಿ

ಪುಟ ಸಂಖ್ಯೆ

## "ಮಾನವ ಕುಲಂ ಒಂದೇ ವಲಂ" - ನಾಡೋಜ ಪಂಪ.

ಜೀವನ ಒಂದು ಮಹಾ ಸಮುದ್ರ. ಸತತವಾಗಿ ಉಕ್ಕೇರಿ ಬರುವ ನೊರೆ, ನೆರೆಯ ಆಸೆ-ಆಮಿಷಗಳೆಂಬ ಅಲೆಗಳು ಸಂಸಾರ ಸಾಗರದಲ್ಲಿ ಮನಸೆಂಬ ಮಟ್ಟದ ಸಮಪಾತಳಿಯನ್ನು ಕೆಡಿಸುತ್ತಾ ಪ್ರಶ್ನಿಸುತ್ತಲೇ ಇರುತ್ತದೆ. ಪ್ರತಿಷ್ಠೆ, ಕಂದಾಚಾರ, ವ್ಯಾಮೋಹ, ಲಾಲಸೆಗಳೆಂಬ ತಿಮಿಂಗಲಗಳು ಜೀವನ ವಾರಿಧಿಯ ಪ್ರಜ್ಞಾಪಾತಳಿಯಲ್ಲಿ ಮಿನುಗುವ ತಾರ್ಕಿಕತೆ, ಮೌಲ್ಯಗಳು, ವೈಜ್ಞಾನಿಕತೆ, ರಸಪ್ರಜ್ಞೆ, ಮುಂತಾದ ಚಿಪ್ಪುಗಳನ್ನು ದೊರಕಿಸಿಕೊಳ್ಳುವಲ್ಲಿ ಮಾರಕವಾಗಬಲ್ಲವು. ಅನೇಕ ದ್ವಂದ್ವಗಳಲ್ಲಿ ಮುಳುಗಿರುವ ಇಂದಿನ ಆಧುನಿಕ ಜೀವನವೆಂಬ ಶರಧೀಯಲ್ಲಿ ತೇಲಿ ಉಳಿದವರಿಗೆ ಆದರ್ಶವಾಗುವಂತಹ ವ್ಯಕ್ತಿಗಳು ವಿರಳ. ಅಂತೆಯೇ ಅವು ನಡುಗಡ್ಡೆಗಳಲ್ಲಿರುವ ದೀಪಸ್ಥಂಭಗಳಂತೆ ದಾರಿ ತಪ್ಪಿ ಹೊಯ್ದಾಟದಲ್ಲಿರುವ ನಾವಿಕರಿಗೆ ಜೀವನದ ದರ್ಶನದತ್ತ ಮಾರ್ಗ ತೋರುತ್ತವೆ. ಇಂಥ ದೀಪಸ್ಥಂಬದ ಜೀವನ ಗಾಥೆಯನ್ನು ಕೆಲವೇ ಪುಟಗಳಲ್ಲಿ ಹೇಳುವ ಸಾಹಸ ಈ ಕಿರು ಹೊತ್ತಿಗೆ. ಸಂದರ್ಭ: ಈ ಶತಮಾನದ ಮಧ್ಯಕಾಲೀನ ಕರ್ನಾಟಕ.

ಬಹುಶಃ ಜಗತ್ತಿನಲ್ಲಿ ಭಾರತೀಯ ಸಾಮಾಜಿಕ ವ್ಯವಸ್ಥೆಯಂತಹ ಸಂಕೀರ್ಣ ವ್ಯವಸ್ಥೆ ಇನ್ನೊಂದು ಇರಲಿಕ್ಕಿಲ್ಲ. ಚಾರಿತ್ರಿಕ ಅಂದಾಜಿನಂತೆ ಸುಮಾರು ಹತ್ತು ಸಾವಿರ ವರ್ಷಗಳಿಗೂ ಮಿಗಿಲಾದ ಮೌಖಿಕ ಸಾಹಿತ್ಯ, ಸಂಪ್ರದಾಯ ಹಾಗೂ ಸರಿಸುಮಾರು ಅಷ್ಟೇ ಹಿಂದಿನದಿರ-ಬಹುದಾದ ಗ್ರಾಂಥಿಕ ಸಾಹಿತ್ಯ ಮತ್ತು ದರ್ಶನ ರೂಪಗಳು 'ಭಾರತ' ವೆಂಬ ಸಾಂಸ್ಕೃತಿಕ ಪರಂಪರೆಯಲ್ಲಿ ಅನುಪಮೇಯುವನ್ನಾಗಿಸಿವೆ. ಸಾಮಾಜಿಕ ಸಂಸ್ಥೆಯಾದ ಕುಟುಂಬವು ಸಮುದಾಯದ ಅತ್ಯಂತ ಮಹತ್ವದ ಅಂಶವೆಂದು ಗುರಿತಿಸಲ್ಪಟ್ಟಿದ್ದರೆ, ಈ ಸಾಮಾಜಿಕ ಸಂಸ್ಥೆಯೊಂದಿಗೆ ವಿವಾಹ, ಬಾಂಧವ್ಯ ಹಾಗೂ ರಕ್ತ ಸಂಬಂಧಗಳು ವಿಲೀನಗೊಂಡು ಸಮಗ್ರವಾದ ಸಂಸ್ಕೃತಿಯೊಂದನ್ನು ಸಾವಿರಾರು ವರ್ಷಗಳ ಮೊದಲೇ ಸ್ಥಾಪಿಸಿದ್ದು ಈ ನೆಲದ ಹಿರಿಮೆ. ಈ ಸಮಾಜದಲ್ಲಿ ವೈವಿಧ್ಯತೆಯ ಹೆಗ್ಗಳಿಕೆ ಮತ್ತು ಶಕ್ತಿ. ಹತ್ತಾರು ಭಾಷೆಗಳು ಹಾಗೂ ನೂರಾರು ಉಪ ಭಾಷೆಗಳು, ಸಾವಿರಾರು ಜಾತಿ-ಉಪಜಾತಿಗಳು, ಅನೇಕ ಪ್ರಮುಖ ಧರ್ಮಗಳ ತವರೂರು ಈ ಭರತ ಭೂಮಿ. ಈ ನೆಲ, ಈ ಜಲ, ಇಲ್ಲಿಯ ಗಿರಿ-ಗುಹೆಗಳು, ಕಾಡು-ಮೇಡುಗಳು ಸಂಸ್ಕೃತಿಯ ಆಳದಲ್ಲಿ ಇಳಿದು, ಬೇರು ಬಿಟ್ಟು ಜನಜೀವನದಲ್ಲಿ ಹಾಸುಹೊಕ್ಕಾಗಿರುವುದನ್ನು ನಾವೇನೂ ಹೊಸದಾಗಿ ಹೇಳಬೇಕಾಗಿಲ್ಲ.

ಹಾಗೆ ನೋಡಿದರೆ ಇಂದು ನಾವು ಬಳಸುತ್ತಿರುವ 'ರಾಷ್ಟ್ರ'ವೆಂಬ ಕಲ್ಪನೆಯು ತೀರಾ ಇತ್ತೀಚಿನದು. ಇದು ಪಶ್ಚಿಮದ ಸಮಾಜಗಳ ಸಂದರ್ಭದಲ್ಲಿ, ರಾಜಕೀಯ ನೆಲೆಯಲ್ಲಿ ಮೂಡಿ ಬಂದ ಪರಿಕಲ್ಪನೆ. ಈ ದೃಷ್ಟಿಯಿಂದ ನೋಡಿದರೆ ಬ್ರಿಟೀಷರು ಭಾರತದಲ್ಲಿ ಕಾಲಿಡುವ ಮೊದಲು ಭಾರತವು 'ಆಧುನಿಕ ರಾಷ್ಟ್ರ'ದ ಯಾವ ಪ್ರಮುಖ ಲಕ್ಷಣವನ್ನೂ ಹೊಂದಿರಲಿಲ್ಲವೆನ್ನುವುದು ನಿರ್ವಿವಾದ. ಹೋಳು ಹೋಳಾದ ಈ ಭೂಖಂಡದಲ್ಲಿ ನೂರಾರು -, ಅಷ್ಟೇ ಏನು, ಸಾವಿರಾರ-ಮಾಂಡಲಿಕರು, ಪಾಳೆಯಾಗಾರರು, ಅರಸರು ಹಾಗೂ ಸಾರ್ವಭೌಮರು ಹರಡಿಕೊಂಡಿದ್ದು ತಮ್ಮ ನೆಲ ಭಾಗಗಳನ್ನು ಆಳುತ್ತಿದ್ದರೆಂಬ ಸಂಗತಿಯನ್ನು ನಮಗೆ ಚರಿತ್ರೆ ತಿಳಿಸುತ್ತದೆ. ಹೀಗಿದ್ದೂ ಕೂಡ ರಾಷ್ಟ್ರೀಯತೆಯ ಉಜ್ವಲ ಭಾವನೆಗಳಿಗೆ ಕೊರತೆಯಿರಲಿಲ್ಲವೆಂಬುದನ್ನೂ ನಾವು ಇಲ್ಲಿ ನೆನಪಿಸಿಕೊಳ್ಳುವುದು ಅತ್ಯಗತ್ಯ. ರಾಜಕೀಯವಾಗಿ

ಹರಿದು ಹಂಚಿಹೋಗಿದ್ದ ಈ ನಾಡಿನ ಭೂಭಾಗಗಳು ಸಾಂಸ್ಕೃತಿಕ ಅಂಶಗಳ ಸಂಯುಕ್ತ ಶಕ್ತಿಯಿಂದಾಗಿ ಒಂದೇ ರಾಷ್ಟ್ರವೆಂಬ ವಿಚಾರವನ್ನು ಪ್ರಕಟಿಸಿದ್ದವು. ಪೂರ್ವ, ಪಶ್ಚಿಮ, ದಕ್ಷಿಣೋತ್ತರ ಭಾಗಗಳೆಲ್ಲೆಡೆ ಒಂದೇ ಸಂಸ್ಕೃತಿ ಹಾಗೂ ಇಂತಹ ಸಂಸ್ಕೃತಿಯ ಆಧಾರದ ಮೇಲೆ ತಲೆತಲಾಂತರಗಳಿಂದ ನಡೆದುಬಂದ ಜೀವನಕ್ರಮ ಮತ್ತು ಜೀವನ ಶೈಲಿಗಳು ಇಂದಿಗೂ ಭಾರತ ದೇಶದ ಸಾಂಸ್ಕೃತಿಕ ರಾಷ್ಟ್ರೀಯತೆಯ ಹೆಗ್ಗುರುತಾಗಿ ನಿಂತಿವೆ.

ಪ್ರಖರವಾದ ಭಾರತೀಯ ರಾಷ್ಟ್ರೀಯತೆಯನ್ನು ಗಳಿಸಿ, ಉಳಿಸಿ, ಬೆಳೆಸುವಲ್ಲಿ ಸಂಸ್ಕೃತಿಯ ಪಾತ್ರದ ಹಿರಿಮೆಯನ್ನು ಈಗಷ್ಟೇ ಹೇಳಿದೆನಲ್ಲವೆ? ಈ ಕುರಿತು ತುಸು ವಿವರಣೆ ಅಗತ್ಯವೆನಿಸುತ್ತದೆ. ಭಾರತೀಯ ಸಂಸ್ಕೃತಿಯಲ್ಲ ಭೌಗೋಳಿಕ ವ್ಯತ್ಯಾಸಗಳನ್ನು ನಿರ್ಲಕ್ಷಿಸಿ ಈ ಭೂಪ್ರದೇಶದ ಎಲ್ಲ ಸಮುದಾಯಗಳನ್ನು ಒಟ್ಟಾಗಿ ಮುಂದೊಯ್ಯುವ ಶಕ್ತಿಸ್ರೋತವಿದೆ. ಆದ್ದರಿಂದಲೇ ಉತ್ತರದಲ್ಲಿ ಹರಿಯುವ ಗಂಗಾ ನದಿ, ದಕ್ಷಿಣದ ರಾಮೇಶ್ವರಂ ಕ್ಷೇತ್ರ, ಪೂರ್ವ ಪ್ರದೇಶದ ಜಗನ್ನಾಥ ಸ್ವಾಮಿಯ ಪುರಿ ಅಥವಾ ಪಶ್ಚಿಮದ ಪಂಡರೀನಾಥನ ದೇವಾಲಯ ಇವೆಲ್ಲವೂ ಎಲ್ಲರಿಗೂ ಪೂಜನೀಯ. ಇಂತಹ ಶಕ್ತಿ ಸ್ರೋತವು ಸಾಮಾನ್ಯ ಮತಾಚರಣೆಯ ಬಂಧನಕ್ಕಿಂತ ವಿಶಾಲವಾಗಿದೆ. ಸಾವಿರಾರು ಧರ್ಮನಿರಪೇಕ್ಷ ಸಾಂಸ್ಕೃತಿಕ ಅಂಶಗಳು ಒಂದಾಗಿ ಇಡೀ ಭರತ ಖಂಡದ ಭೂಪ್ರದೇಶಕ್ಕೆ ವಿಶಿಷ್ಟ ಸಂಸ್ಕೃತಿಯ ಹೊನ್ನು ಸುರಿದಿವೆ. ಆದ್ದರಿಂದಲೇ ನಮ್ಮ ದೇಶದ ಯಾವುದೇ ಐತಿಹಾಸಿಕ ವ್ಯಕ್ತಿ-ವಿಷಯ-ವಸ್ತುಗಳ ಅಧ್ಯಯನದಲ್ಲಿ ಸಾಂಸ್ಕೃತಿಕ ಚೌಕಟ್ಟಿನ ಚರ್ಚೆ ಅನಿವಾರ್ಯ ಅಷ್ಟೇ ಅಲ್ಲ, ಅಗತ್ಯವೂ ಕೂಡ. ಸಮುದಾಯದ ಹೊರತಾಗಿ ಸಾಮಾಜಿಕ ವ್ಯಕ್ತಿತ್ವ ರೂಪುಗೊಳ್ಳಲಾದು; ಅಂತೆಯೇ ಕೆಲವು ವ್ಯಕ್ತಿತ್ವಗಳು ಸಮುದಾಯದ ಅಂತಸ್ತು ಮತ್ತು ಅಂತಸ್ಸತ್ವಗಳನ್ನು ರೂಪಿಸುವಂತವುಗಳಾಗಿ ಬೆಳೆದುನಿಲ್ಲುತ್ತವೆ.

ಭಾರತದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮವನ್ನೂ ಕೂಡ ನಮ್ಮ ಸಾಂಸ್ಕೃತಿಕ ಪರಂಪರೆಯ ಛಾಯೆಯಲ್ಲಿಯೇ ಅರ್ಥೈಸಿಕೊಳ್ಳಬೇಕಾದ ಅಗತ್ಯವಿದೆ. ಇಂಗ್ಲೀಷರ ವಿರುದ್ಧ ನಡೆದ ಸ್ವಾತಂತ್ರ್ಯ ಹೋರಾಟ ನಮ್ಮ ಸಂಸ್ಕೃತಿಯು ತನ್ನ ಪುನರುತ್ಥಾನ ಹಾಗೂ ಪುನರುಜ್ಜೀವನಕ್ಕೆಂದು ಮುಡಿಕೊಡವಿ ಎದ್ದ ಮತ್ತೊಂದು ಉದಾಹರಣೆಯಷ್ಟೆ. ಭಾರತದ ದೀರ್ಘಕಾಲೀನ ಇತಿಹಾಸದಲ್ಲಿ ತನ್ನನ್ನು ಬಂಧ ವಿಮುಕ್ತಳಾಗಿ ಮಾಡಿಕೊಳ್ಳಲು ಈ ತಾಯಿನಾಡು ನಡೆಸಿದ ಸಂಗ್ರಾಮಗಳು ಅವೆಷ್ಟೋ. ಸಂಸ್ಕೃತಿಯಲ್ಲಿ ಪದರುಗಳು ಉಂಟಾಗಿ ಜನತೆ ನಂಬಿ ಬಹುಕಾಲ ಬಾಳಿಬಂದ ಮೌಲ್ಯಗಳು ಸಡಿಲಗೊಂಡಾಗಲೆಲ್ಲೆ ನಿಷ್ಕ್ರಿಯತೆಯತ್ತ ನಡೆದ ಸಮಾಜವನ್ನು ಈ ಸಂಸ್ಕೃತಿಯಿಂದ ಚಿಮ್ಮಿದ ಜೀವಹನಿಗಳು ಧುರೀಣತ್ವವಹಿಸಿ ಕಾದಾಡಿದ್ದು ನಿಯಮಿತವಾಗಿದೆ. ನಿಜವಾಗಿ ನೋಡಿದರೆ ಇಂತಹ ಸಾಂಸ್ಕೃತಿಕ ಧಾರಾಪ್ರವಾಹದಿಂದಾಗಿಯೇ ಜಡ ಮತ್ತು ನಿಷ್ಕ್ರಿಯ ಭಾಗಗಳಲ್ಲಿ ಕ್ರಿಯಾತ್ಮಕತೆ ಚಿಮ್ಮಿ ಅವು ಸಚೇತನಗಳಾಗಿ ಮಾರ್ಪಾಡಾದಂತಹ ಉದಾಹರಣೆಗಳು ಬಹಳ. ಬೌದ್ಧ-ಜೈನ ಧರ್ಮಗಳ ಸೃಷ್ಟಿಯಲ್ಲಿ, ಚಾರ್ವಾಕ ಪಂಥದ ವೈಚಾರಿಕ ಮಜಲಿನಲ್ಲಿ ಬಸವಣ್ಣ-ಅಲ್ಲಮರಂತಹ ಶರಣರ ಸಾಮಾಜಿಕ ಚಳವಳಿಗಳಲ್ಲಿ, ಗಾಂಧಿ, ಅಂಬೇಡ್ಕರ್‌ರಂತಹ ನೇತಾರರ ಸಾಮಾಜಿಕ-ಆರ್ಥಿಕ ಕಾರ್ಯಕ್ರಮಗಳಲ್ಲಿ ನಾವು ಈ ಸಂಸ್ಕೃತಿಯ ಜಡಭಾಗಗಳ ವಿರುದ್ಧ ಎತ್ತಿದ ಧ್ವನಿಯನ್ನು ಗುರುತಿಸಬಹುದು. ಇಂತಹ ಸಾಂಸ್ಕೃತಿಕ ಆಹ್ವಾನವು ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ಸಮಕಾಲೀನ ಸಂದರ್ಭದಲ್ಲಿ ಅಗತ್ಯವಿದ್ದ ವಿಮರ್ಶಾತ್ಮಕ ಪ್ರಶ್ನೆಗಳನ್ನು

ಎತ್ತಿದ್ದರಿಂದ ಇಂದಿಗೂ ಈ ರಾಷ್ಟ್ರೀಯ ಸಂಸ್ಕೃತಿ ಮುಂದುವರಿದು ಹರಿದು ಬರಲು ಸಾಧ್ಯವಾಯಿತು. ಈಗ ನಿಮ್ಮ ಕೈಯಲ್ಲಿರುವ ಹೊತ್ತಿಗೆಯ ನಾಯಕ ಕೆ. ಟಿ. ಭಾಷ್ಯಂ ಅವರೂ ಕೂಡ ಇಂತಹ ಉಜ್ವಲ ರಾಷ್ಟ್ರೀಯ ಪರಂಪರೆಯ ಗಿಡದಿಂದ ಸಿಡಿದ ಸಾಂಸ್ಕೃತಿಕ ಕಾಳು. ಇಂಥ ಮಹಾನ್ ರಾಷ್ಟ್ರೀಯ ಪರಂಪರೆಯ ರವಿರಶ್ಮಿ.

ದೇಶದ ಒಂದು ಮಹತ್ವದ ಭಾಗವಾಗಿ ಕರ್ನಾಟಕ ಪ್ರಾಂತ್ಯವು ಸಾಂಪ್ರದಾಯಿಕ ಮೌಲ್ಯಗಳೊಂದಿಗೆ ತನ್ನ ಆಧುನಿಕತೆಯ ಹೊಸತನದ ಛಾಪು ಮೂಡಿಸುವಲ್ಲಿ ಗಣನೀಯ ಪಾತ್ರವಹಿಸಿದೆ. 'ಕಾವೇರಿಯಿಂದ ಮಾ ಗೋದಾವರಿಯವರ್ಗೆ' ಇದ್ದ ಈ ನಾಡು ಜೀವನದ ಹತ್ತು ಹಲವು ರಂಗಗಳಲ್ಲಿ ತನ್ನ ವೈಶಿಷ್ಟತೆಯನ್ನು ಮೆರೆದಿದೆ. ಸುಮಾರು ಸಾವಿರದ ಎರಡು ನೂರು ವರ್ಷಗಳಿಗೂ ಹಿರಿದಾದ ಸಾಹಿತ್ಯ, ಕಲೆ ಮತ್ತು ಸಂಗೀತಗಳಿಂದ ರಾಷ್ಟ್ರೀಯ ಪರಂಪರೆಯೊಳಗೆ ಇದ್ದು ತನ್ನ ವಿಶಿಷ್ಟ ಸೊಬಗನ್ನು ಮೆರೆದ ಭೂಮಿ ನಮ್ಮ ಕರ್ನಾಟಕ. ಕಾಲಕ್ಕೆ ತಕ್ಕಂತೆ ಸಾಮಾಜಿಕ ಬದಲಾವಣೆಗಳಿಗೆ ಸ್ಪಂದಿಸಿ ಇಂತಹ ಬದಲಾವಣೆಗಳ ನಡುವೆಯೂ ತನ್ನತನವನ್ನು ಉಳಿಸಿಕೊಂಡಿರುವ ಬೀಡು ಇದು. ರಾಷ್ಟ್ರ ಮಟ್ಟದ, ಅಂತರಾಷ್ಟ್ರೀಯ ಮಟ್ಟದ ನೂರಾರು-ಸಾವಿರಾರು ಪ್ರತಿಭಾ ಸಂಪನ್ನರು ಇಲ್ಲಿ ಮಿಂಚಿದ್ದಾರೆ. ಕನ್ನಡದ ಹೆಮ್ಮೆಯ ಪುತ್ರ, ಸ್ವಾತಂತ್ರ್ಯಯೋಧ ನಿಷ್ಣಾತರಾಜಕಾರಿಣಿ ಎಲ್ಲಕ್ಕೂ ಮಿಗಿಲಾಗಿ ಜನರ ನೋವಿಗೆ ಮಿಡಿಯುವ ಹೃದಯವಂತ ಕೆ. ಟಿ. ಭಾಷ್ಯಂ ಕನ್ನಡ ನಾಡಿನ ಇಂಥ ಧೀಮಂತ ಪುತ್ರರಲ್ಲಿ ಒಬ್ಬರು.

ಕರ್ನಾಟಕದ ಹಿರಿಮೆಯನ್ನು ಹೊಗಳುವುದು ಈ ಪುಸ್ತಕದ ಉದ್ದೇಶವಲ್ಲ. ಆ ಕುರಿತು ಸಾವಿರಾರು ಕೃತಿಗಳು ಲಭ್ಯವಿರುವುದು ನಮಗೆಲ್ಲರಿಗೂ ಗೊತ್ತು. ಹಾಗೆಯೇ ಕೆ. ಟಿ. ಭಾಷ್ಯಂ ಅವರ ಜೀವನವನ್ನು ವೈಭವೀಕರಿಸಿ ಅವರನ್ನು 'ದೇವಮಾನವ'ರೆಂದು ವರ್ಣಿಸುವ ಉದ್ದೇಶವನ್ನೂ ಈ ಹೊತ್ತಿಗೆ ಖಂಡಿತಕ್ಕೂ ಹೊಂದಿಲ್ಲ. ಅದೂ ಕೂಡ ಈ ವ್ಯಕ್ತಿಗೆ ಮತ್ತು ನಾಡಿನ ಇತಿಹಾಸಕ್ಕೆ ನಾವು ಮಾಡುವ ಅಪಚಾರವೇ ಆದೀತು. ಭಾಷ್ಯಂ ಐಯ್ಯಂಗಾರ್ ಅವರ ಜೀವನ ಕಥೆಯನ್ನು, ಅವರು ಕನ್ನಡ ಪ್ರಾಂತ್ಯದ ಜನರ ಭವಿಷ್ಯಕ್ಕಾಗಿ ಅನುಭವಿಸಿದ ವ್ಯಥೆಯನ್ನು, ನಮ್ಮ ದೇಶದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಪರಿಧಿಯಲ್ಲಿ ನೋಡುವ ಸಣ್ಣ ಯತ್ನವಿದಾಗಿದೆ. ಭಾಷ್ಯಂ ಅವರ ಸಾಧನೆಗಳನ್ನು ಮತ್ತು ವಿಚಾರಗಳನ್ನು ವಸ್ತುನಿಷ್ಠವಾಗಿ ಗುರುತಿಸಿ ಕನ್ನಡ ಮಹಾಜನತೆಗೆ ನೀಡಲು ಈ ಪುಸ್ತಕದ ಮೂಲಕ ನಾನು ಪ್ರಯತ್ನಿಸುತ್ತೇನೆ. ಭಾಷ್ಯಂ ಅವರು ಇಂದಿನ ಯುವಜನತೆಗೆ ಕೇವಲ ಒಬ್ಬ ಸಾಮಾನ್ಯ ರಾಜಕಾರಣಿಯಾಗಿ ಕಾಣಿಸದೆ ಅದಕ್ಕೂ ಮಿಗಿಲಾಗಿ ಒಬ್ಬ ನಿಷ್ಠಾವಂತ ಸ್ವಾತಂತ್ರ್ಯ ಯೋಧರಾಗಿ, ಉನ್ನತ ತತ್ವಾದರ್ಶಗಳ ಮಾದರಿಯಾಗಿ ಕಂಡರೆ ನನ್ನ ಈ ಪುಟ್ಟ ಪ್ರಯತ್ನಕ್ಕೆ ಬಹುಮಟ್ಟಿಗೆ ಸಫಲತೆ ದೊರಕೀತೆಂದು ನಾನು ಅಂದುಕೊಳ್ಳುತ್ತೇನೆ.

# ಭಾಗ - 1

## ಜೀವನ ದರ್ಶನ

## ಕೆ. ಟಿ. ಭಾಷ್ಯಂ

ಭಾಷ್ಯಂರವರನ್ನು ಕುರಿತು ಬರೆಯುವದು ಸುಲಭವಲ್ಲ. ಆನೇಕ ಆಯಾಮಗಳಿದ್ದ ವ್ಯಕ್ತಿತ್ವ ಇವರದು. ಬಲು ಸಂಕೀರ್ಣ ವಿಚಾರ, ವ್ಯವಹಾರಗಳನ್ನು ಹೊಂದಿದ ಭಾಷ್ಯಂ ಅಯ್ಯಂಗಾರ್ ಅವರ ಜೀವನದ ಪ್ರತಿ ದಿನವೂ, ಪ್ರತಿ ಕ್ಷಣವೂ ವಿಚಾರ, ವಿಮರ್ಶೆಗಳಿಗೆ ಅರ್ಹತೆ ಪಡೆಯುತ್ತದೆ. ಆದರೆ ಕೇವಲ ಜೀವನ ಚರಿತ್ರೆಯೊಂದೇ ಈ ಪುಸ್ತಕವನ್ನು ಬರೆಯುತ್ತಿರುವ ನನ್ನ ಉದ್ದೇಶವಲ್ಲದೇ ಇದ್ದುದರಿಂದ ಭಾಷ್ಯಂರವರ ಜೀವನದ ಮಹತ್ವದ ಹಂತಗಳನ್ನು ಇಲ್ಲಿ ಮೈಸೂರಿನ ಸ್ವಾತಂತ್ರ್ಯ ಸಂಗ್ರಾಮದ ನೆರಳಿನಲ್ಲಿ ಚರ್ಚಿಸಲು ಯತ್ನಿಸುತ್ತೇನೆ. ಇಂತಹ ಪ್ರತಿಯೊಂದು ಹಂತವೂ ಅಂದಿನ ಭಾರತದ ಹಾಗೂ ಕರ್ನಾಟಕದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳ ಪ್ರಭಾವಕ್ಕೆ ಒಳಪಟ್ಟಿದ್ದರಿಂದ ಭಾಷ್ಯಂರವರ ಜೀವನ ಚಿತ್ರಣವು ಬಹುಮಟ್ಟಿಗೆ ಆ ಸಮಯದ ಸಾಮಾಜಿಕ ಚಿತ್ರಣವೂ ಆಗಿ ರೂಪುಗೊಳ್ಳುವದರಲ್ಲಿ ಸಂದೇಹವಿಲ್ಲ. ಪುಸ್ತಕದ ಮಿತಿಯನ್ನು ಲಕ್ಷದಲ್ಲಿರಿಸಿಕೊಂಡು ಭಾಷ್ಯಂರವರ ಸುತ್ತಲೂ ಇದ್ದ ಹಾಗೂ ಅವರೊಂದಿಗೆ ಹೆಜ್ಜೆ ಹಾಕಿದ ಆ ಸಮಯದ ಕೆಲವು ವ್ಯಕ್ತಿಗಳ ವಿಚಾರಗಳನ್ನು ಬಹು ಮಟ್ಟಿಗೆ ಸಂಕ್ಷಿಪ್ತಗೊಳಿಸುವದು ಅನಿವಾರ್ಯವಾಗಿದೆ. ಆದರೂ ತೀರ ಅಗತ್ಯವಿರುವಷ್ಟರ ಮಟ್ಟಿಗೆ ಭಾಷ್ಯಂರವರೊಡನೆ ಸಾಂಸ್ಕೃತಿಕ ಸಂದರ್ಭದಲ್ಲಿ ಬೆರೆತ ವ್ಯಕ್ತಿಗಳ ವಿಷಯದಲ್ಲಿಯೂ ಆಗೊಮ್ಮೆ-ಈಗೊಮ್ಮೆ ಇಣುಕಿ ನೋಡುವ ಪ್ರಯತ್ನವೂ ಇಲ್ಲಿದೆ. ದಿನಗಳು, ದಿನಾಂಕಗಳಿಗಿಂತಲೂ ಘಟನೆಗಳು-ಘಟನೆಗಳ ಹಿಂದಿದ್ದ ವಿಚಾರಣಗಳು ಇಲ್ಲಿ ಹೆಚ್ಚು ಮಹತ್ವ ಪಡೆಯುತ್ತವೆ.

ಕೆ. ತುಪ್ಪಲ್ ನರಸಿಂಹ ಐಯ್ಯಂಗಾರ ಭಾಷ್ಯಂ ೧೮೯೫ರ ಏಪ್ರಿಲ್ ೧೨ ರಂದು ಬೆಂಗಳೂರಿನಲ್ಲಿ ಜನಿಸಿದರು. ಮಗು ಹುಟ್ಟಿ ವಾರದೊಳಗೆ ತಾಯಿ ಬಾಣಂತನದ ಸಮಸ್ಯೆಯಿಂದ ತೀರಿಕೊಂಡಿದ್ದರಿಂದ ತಾಯಿಯ ಮಮತೆ ಲಾಲನೆಗಳಿಂದ ಭಾಷ್ಯಂ ಪ್ರಾರಂಭದಿಂದಲೂ ವಂಚಿತರಾದರು. ಅಂತೆಯೇ ಮುಂದಿನ ವರ್ಷಗಳಲ್ಲಿ ಕನ್ನಡ ತಾಯಿಯನ್ನೇ ಈ ಮಗ ಆಲಂಗಿಸಿಕೊಂಡಿದ್ದರಲ್ಲಿ ಆಚ್ಚರಿಯಿಲ್ಲ. ತಂದೆ ಶ್ರೀ ನರಸಿಂಹ ಅಯ್ಯಂಗಾರ್ ಆ ಸಮಯದಲ್ಲಿ ಬೆಂಗಳೂರಿನ ಅತ್ಯಂತ ಪ್ರಸಿದ್ಧ ವಕೀಲರಲ್ಲಿ ಒಬ್ಬರಾಗಿದ್ದರು. ಮನೆಯಲ್ಲಿ ತಿಂದುಂಡು ಸುಖವಾಗಿರಲು ಬೇಕಾಗುವಷ್ಟು ಉತ್ಪನ್ನವಿತ್ತು. ಆರ್ಥಿಕ ಭದ್ರತೆ ಹಾಗೂ ಒಳ್ಳೆಯ ಹೆಸರು ಗಳಿಸಿದ್ದ ಕುಟುಂಬ ಭಾಷ್ಯಂರವರದು. ಮೊದಲ ಮಗುವನ್ನು ಪಡೆದು ಮಡದಿ ಕಣ್ಣು ಮುಚ್ಚಿದ ನಂತರ ಭಾಷ್ಯಂರವರ ತಂದೆ ಮತ್ತೊಂದು ಮದುವೆಯಾಗಲು ಇಷ್ಟಪಡಲಿಲ್ಲ. ಆದ್ದರಿಂದ ಭಾಷ್ಯಂ ಆ ಕುಟುಂಬದ ಏಕೈಕ ಮಗುವಾಗಿ ಬೆಳೆದರು. ಬಾಲ್ಯದಲ್ಲಿ ತಮ್ಮದಾದ ಶ್ರೀ ವೈಷ್ಣವ ಉಪಜಾತಿಯ ಪ್ರಭಾವಕ್ಕೆ ತುಸು ಒಳಗಾಗಿದ್ದರೆಂದು ಕಾಣುವದಾದರೂ ಆ ಬಗ್ಗೆ ನಿಖರ ದಾಖಲೆಗಳು ಎಲ್ಲಿಯೂ ಲಭ್ಯವಿದ್ದಂತಿಲ್ಲ. ಹಾಗಾಗಿ ಇದು ಅವರೊಂದಿಗೆ ಬಹಳ ಕಾಲ ಕಳೆದ ಕೆಲವು ಕಿರಿಯ ಸಂಗಾತಿಗಳ ಸಾಮಾನ್ಯ ಅನಿಸಿಕೆಯೆಂದಷ್ಟೇ ನಮೂದಿಸಬಹುದು.

ನಂತರದ ದಿನಗಳಲ್ಲಿ ಭಾಷ್ಯಂರವರು ತಮ್ಮ ಉಪಜಾತಿಯನ್ನು ಸಂಕೇತಿಸುವ ಐಯ್ಯಂಗಾರ್ ಪದನಾಮವನ್ನು ಬಿಟ್ಟುಕೊಟ್ಟು ಕೇವಲ ಕೆ. ಟಿ. ಭಾಷ್ಯಂ ಎಂದೇ ಕರೆಸಿಕೊಂಡು. ಬಹುಶಃ ಕಾಲಕ್ರಮೇಣ ಭಾಷ್ಯಂರವರಿಗೆ ತಮ್ಮ ಉಪಜಾತಿಯ ಆಚಾರಗಳಲ್ಲಿ ನಂಬಿಕೆ

ಕಡಿಮೆಯಾಗಿರಬೇಕೆನಿಸುತ್ತದೆ, ಅಥರಾ ತೀರ ಸಂಕುಚಿತ ಮತಾಚಾರಗಳ ಕಟ್ಟುಪಾಕಡುಗಳು ಸದಾ ಜೈಲಿನೊಳಗೇ ಒಂದು ಕಾಲಿಟ್ಟಿದ್ದ ಈ ಸತ್ಯಾಗ್ರಹಿಗೆ ಅರ್ಥಹೀನ ಬಂಧನವೆನಿಸಿದರೂ ಆಶ್ಚರ್ಯವಿಲ್ಲ. ಧರ್ಮದ ಕುರಿತಾದ ಅವರ ವಿಚಾರಗಳನ್ನು ಮುಂದೆ ಚರ್ಚಿಸುತ್ತೇನೆ.

ಭಾಷ್ಯಂ ತಮ್ಮ ಬಾಲ್ಯದ ಕೆಲ ಸಮಯವನ್ನು ತಾಯಿಯ ತವರೂರಿನಲ್ಲಿ ಅಜ್ಜನ ಮನೆಯಲ್ಲಿ ಕಳೆದರೆಂದು ಅವರ ಹತ್ತಿರದ ಅನುಯಾಯಿಗಳು ತಮ್ಮ ಸಂದರ್ಶನದ ಸಮಯದಲ್ಲಿ ನನಗೆ ಹೇಳಿದ್ದುಂಟು. ಆ ಸಮಯದಲ್ಲಿ ಅವರು ಮದ್ರಾಸಿನಲ್ಲಿ ಕಳೆದ ದಿನಗಳಲ್ಲಿ ನಡೆಸಿದ ಚಟುವಟಿಕೆಗಳ ವಿವರಗಳು ನನಗೆ ಲಭ್ಯವಿಲ್ಲ. ಆ ವಿವರಗಳನ್ನು ನೀಡುವಂತಹ ವ್ಯಕ್ತಿಗಳಾರೂ ಈಗ ಜೀವಿಸಿದ್ದಂತಿಲ್ಲ, ಆದರೆ ಮದ್ರಾಸಿನ ತಮ್ಮ ಅಜ್ಜನ ಮನೆಯಲ್ಲಿ ಭಾಷ್ಯಂ ಪ್ರಾರಂಭಿಕ ವಿದ್ಯಾಭ್ಯಾಸವನ್ನು ಮುಗಿಸಿದರು. ತರಗತಿಗಳಲ್ಲಿ ತುಂಬಾ ತುಂಟರೂ ಹಾಗೆಯೇ ಬುದ್ಧಿವಂತರೂ ಆಗಿದ್ದ ಹುಡುಗ ಭಾಷ್ಯಂ ಪರೀಕ್ಷೆಗಳಲ್ಲಿ ಪ್ರಾರಂಭದ ತರಗತಿಗಳಿಂದಲೂ ಸತತ ಉತ್ತಮ ಅಂಕಗಳನ್ನು ಪಡೆದು ತೇರ್ಗಡೆಯಾದರು. ಜೊತೆಯಲ್ಲಿಯೇ ದೈಹಿಕ ಕಸರತ್ತುಗಳಿಗೆ ಚಾಲನೆ ಕೊಡುವ ಮರಕೋತಿ, ಚೆಂಡಾಟ, ಕುಸ್ತಿ, ಮುಂತಾದವುಗಳಲ್ಲಿ ಭಾಷ್ಯಂ ಬಾಲ್ಯದಲ್ಲಿ ಸಾಕಷ್ಟು ಅಭಿರುಚಿ ಮತ್ತು ಪ್ರಾವಿಣ್ಯ ತೋರಿದರು. ತಮ್ಮ ಈ ಅಭಿರುಚಿಯನ್ನು ಮುಂದೆ ತಮ್ಮ ಅಮೋಘ ಭಾಷಣಗಳಲ್ಲಿ ಭಾಷ್ಯಂ ಹೇಳಿದ್ದುಂಟು. ಕ್ರೀಡೆಗೆ ಅತ್ಯಂತ ಅಗತ್ಯವಿರುವ ಸ್ಪರ್ಧಾತ್ಮಕ ಮನೋಭಾವವನ್ನು ಭಾಷ್ಯಂ ತಮ್ಮ ಜೀವನದ ಪ್ರತಿ ದಿನ, ಪ್ರತಿ ಕ್ಷಣ ತೋರಿಸಿದರೆನ್ನುವ ಮಾತಿನಲ್ಲಿ ತುಸುಕೂಡ ಅತಿಶಯೋಕ್ತಿ ಇಲ್ಲ.

ಪ್ರಾಥಮಿಕ ಶಿಕ್ಷಣವನ್ನು ಮದ್ರಾಸಿನಲ್ಲಿ ಮುಗಿಸಿದ ಭಾಷ್ಯ್ಂರವರನ್ನು ಮಾಧ್ಯಮಿಕ ಶಿಕ್ಷಣಕ್ಕೆಂದು ತಂದೆ ಬೆಂಗಳೂರಿಗೆ ಕರೆದುಕೊಂಡು ಬಂದರು. ಬರುವಾಗ ತನಗೆ ಸ್ವಲ್ಪವೂ ಬಾರದಿದ್ದ ಕನ್ನಡ ಭಾಷೆಯನ್ನು ಕೆಲವೇ ತಿಂಗಳುಗಳಲ್ಲಿ ಭಾಷ್ಯಂ ಕರತಲಾಮಲಕ ಮಾಡಿಕೊಂಡರು. ಬೆಂಗಳೂರಿನಲ್ಲಿ ಮಾಧ್ಯಮಿಕ ಶಿಕ್ಷಣದ ಸಮಯದಲ್ಲಿ ತಮ್ಮ ಪ್ರತಿಭೆ ಹಾಗೂ ಶ್ರದ್ಧೆಗಳಿಂದ ಈ ತುಂಟ ಹುಡುಗ ಎಲ್ಲ ಉಪಾಧ್ಯಾಯರುಗಳ ಆತ್ಮೀಯತೆ ಹಾಗೂ ಪ್ರೀತಿಗೆ ಪಾತ್ರರಾದದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಈ ಹಂತದಲ್ಲಿಯೂ ಕೂಡ ಆಟ, ಪಾಠ ಎರಡರಲ್ಲಿಯೂ ಭಾಷ್ಯಂರವರು ಸಾಕಷ್ಟು ಪ್ರತಿಭೆ ಮತ್ತು ಆಸಕ್ತಿಗಳನ್ನು ತೋರಿಸಿ ಶಾಲೆಯ ಉತ್ತಮ ವಿದ್ಯಾರ್ಥಿ ಎನಿಸಿಕೊಂಡರು.

ಮಾಧ್ಯಮಿಕ ಶಿಕ್ಷಣದ ಹಂತದಲ್ಲಿ ಉತ್ತಮ ಅಂಕಗಳನ್ನು ಗಳಿಸಿದ ಭಾಷ್ಯಂ ತಮ್ಮ ಉನ್ನತ ಶಿಕ್ಷಣಕ್ಕಾಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜು ಸೇರಿದರು. ಸೆಂಟ್ರಲ್ ಕಾಲೇಜ್ ಆ ಸಮಯದಲ್ಲಿ ಬೆಂಗಳೂರು ನಗರದಲ್ಲಷ್ಟೇ ಅಲ್ಲದೆ ಸುತ್ತಮುತ್ತಲಿನ ಸ್ಥಳಗಳಲ್ಲಿಯೂ ತುಂಬಾ ಒಳ್ಳೆಯ ಮಹಾವಿದ್ಯಾಲಯವೆಂದು ಹೆಸರುವಾಸಿಯಾಗಿತ್ತು. ಶಿಕ್ಷಣದ ಮಾಧ್ಯಮ ಆಗ ಅಲ್ಲಿ ಆಂಗ್ಲ ಭಾಷೆ. ಕಾಲೇಜಿನ ಪ್ರಾಂಶುಪಾಲರುಗಳು ಬ್ರಿಟೀಷ್ ಶಿಕ್ಷಣ ತಜ್ಞರು ಆಗಿರುತ್ತಿದ್ದು ವಿಶೇಷತಃ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ ಆಳವಾದ ಅಧ್ಯಯನಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಲಾಗುತ್ತಿತ್ತು. ಕಾಲೇಜಿನ ಸಾಮಾನ್ಯ ವಾತಾವರಣವೂ ಸಹ ಬಿಗಿಯಾಗಿದ್ದು ಶಿಸ್ತು, ನಡತೆ ಮತ್ತು ಅಚ್ಚುಕಟ್ಟಾಗಿರುವುದನ್ನು ಕಾಲೇಜ್ ವಿದ್ಯಾರ್ಥಿಗಳಿಂದ ಕಡ್ಡಾಯವಾಗಿ ನಿರೀಕ್ಷಿಸಲಾಗುತ್ತಿತ್ತು. ಭಾಷ್ಯಂರವರ ಮುಂದಿನ ಜೀವನದಲ್ಲಿ ನಾವು ಈ ಎಲ್ಲ ಅಂಶಗಳನ್ನೂ ಸ್ಪಷ್ಟವಾಗಿ ಗಮನಿಸಬಹುದು.

ಭಾಷ್ಯಂರವರ ಇಂಗ್ಲೀಷ್, ತಮಿಳು ಮತ್ತು ಕನ್ನಡ ಭಾಷೆಗಳ ಮೇಲಿನ ಅಸಾಧಾರಣ ಪ್ರಭುತ್ವದ ಕುರಿತು ನಂತರ ವಿವರವಾಗಿ ಬರೆಯುತ್ತೇನೆ. ಆದರೆ ಒಂದು ಮಾತನ್ನು ಮಾತ್ರ ನಿಖರವಾಗಿ ಇಲ್ಲಿ ಹೇಳಲೇಬೇಕು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಪ್ರಾಧ್ಯಾಪಕರುಗಳು ಹಾಗೂ ಅಲ್ಲಿನ ಶೈಕ್ಷಣಿಕ ವಾತಾವರಣವು ಭಾಷ್ಯಂರವರ ಭವಿಷ್ಯದ ಜೀವನದ ಮೇಲೆ ಬಲವಾದ ಪ್ರಭಾವ ಬೀರಿದ್ದಂತೂ ನಿರ್ವಿವಾದ ಸತ್ಯ. ೧೯೧೨ ರಿಂದ ೧೯೧೭ರ ಐದು ವರ್ಷಗಳ ಅವಧಿಯಲ್ಲಿ ಭಾಷ್ಯಂ ತಮ್ಮ ಕಾಲೇಜಿನ ಶ್ರೇಷ್ಠ ವಿದ್ಯಾರ್ಥಿಗಳಲ್ಲಿ ಒಬ್ಬರೆಂದು ಪರಿಗಣಿಸಲ್ಪಟ್ಟರು. ಆಟ-ಓಟ-ಪಾಠಗಳೆಲ್ಲವುಗಳಲ್ಲಿಯೂ ಈ ಹುಡುಗ ಎತ್ತಿದ ಕೈ. ಬಿ.ಎ. ಪದವಿಯಲ್ಲಿ ಓದುತ್ತಿರುವಾಗ ಉತ್ತಮವಾದ ಅಂಕಗಳಿಗೆಂದು ಸ್ವರ್ಣಪದಕ ಮತ್ತು ಪಾರಿತೋಷಕಗಳು ಇವರನ್ನು ಅರಸಿಕೊಂಡು ಬಂದವು. ಜೊತೆಗೆ ಕ್ರಿಕೆಟ್, ಟೆನಿಸ್, ಫುಟ್ಬಾಲ್ ಮುಂತಾದ ಕ್ರೀಡೆಗಳ ಗುಂಪಿನ ಸದಸ್ಯರೂ ಆಗಿ ಭಾಷ್ಯಂ ತಮ್ಮ ಸಹಪಾಠಿಗಳಲ್ಲಿ ಪ್ರಸಿದ್ಧರಾಗಿದ್ದರು. ಅವರ ಧುರೀಣತ್ವ ಮತ್ತು ಕರ್ತೃತ್ವ ಶಕ್ತಿಗಳು ಅವರನ್ನು ಕಾಲೇಜಿನ ಜನಪ್ರಿಯ ಯುವಶಕ್ತಿಯಾಗಿ ಮಾರ್ಪಡಿಸಿದವು. ಭಾಷ್ಯಂರವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜ್ ವರ್ಷಗಳು ಮಹತ್ವದ ಪಾತ್ರ ವಹಿಸಿದವೆಂಬುದು ಅವರ ಅನೇಕ ನಿಕಟವರ್ತಿಗಳ ಅಭಿಪ್ರಾಯ.

ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯಗಳು ಅಸ್ತಿತ್ವದಲ್ಲಿ ಇರದಿದ್ದ ಸಮಯವದು. ಆದ್ದರಿಂದ ಆಗ ಬೆಂಗಳೂರು ಸೆಂಟ್ರಲ್ ಕಾಲೇಜು ಮದ್ರಾಸ್ ವಿಶ್ವವಿದ್ಯಾಲಯದ ಅಡಿಯಲ್ಲಿ ಕೆಲಸ ನಿರ್ವಹಿಸಬೇಕಾಗಿತ್ತು. ಮೈಸೂರು ವಿಶ್ವವಿದ್ಯಾನಿಲಯವು ಈ ಅವಧಿಯಲ್ಲಿಯೇ ಅಸ್ತಿತ್ವಕ್ಕೆ ಬಂದಿದ್ದರೂ ಕೂಡ ಅಲ್ಲಿ ಎಲ್ಲ ವಿಷಯಗಳ ಅಧ್ಯಯನ ವಿಭಾಗಗಳು ಇನ್ನೂ ಪ್ರಾರಂಭವಾಗಿರಲ್ಲಿಲ್ಲ. ಕಾಲೇಜು ದಿನಗಳಲ್ಲಿಯೇ ಉತ್ತಮ ವಾಗ್ಮಿ ಹಾಗೂ ಚತುರ ಮಾತುಗಾರ ಎನಿಸಿದ್ದ ಭಾಷ್ಯಂ ಬಿ.ಎ. ಪದವಿಯ ನಂತರ ತಂದೆಯಂತೆಯೇ ವಕೀಲರಾಗಿ ಸೇವೆ ಸಲ್ಲಿಸಲು ನಿರ್ಧರಿಸಿದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕಾನೂನು ಮಹಾವಿದ್ಯಾಲಯಗಳು ಆಗ ಇಲ್ಲದಿದ್ದ ಕಾರಣ ಅವರು ಪುನಃ ತಮ್ಮ ತಾಯಿಯ ರಾಜ್ಯವಾದ ಮದ್ರಾಸ್ ಪ್ರಾಂತ್ಯಕ್ಕೆ ಕಾನೂನು ಅಧ್ಯಯನಕ್ಕೆಂದು ಮರಳಲು ನಿಶ್ಚಯಿಸಿದರು. ಅಂತೆಯೇ ಮದ್ರಾಸಿನ ಕಾನೂನು ಮಹಾವಿದ್ಯಾಲಯದಲ್ಲಿ ಎರಡು ವರ್ಷದ ಬಿ.ಎಲ್. ಪದವಿ ಮುಗಿಸಿ ಬೆಂಗಳೂರಿಗೆ ೧೯೧೯ರಲ್ಲಿ ಭಾಷ್ಯಂ ತಿರುಗಿ ಬಂದರು. ವಾಪಸ್ಸಾದ ಕೂಡಲೇ ಮೈಸೂರು ಸಂಸ್ಥಾನದ ಉನ್ನತ ನ್ಯಾಯಾಲಯದ ವಕೀಲಿ ವೃತ್ತಿಗೆಂದು ಮನವಿ ಸಲ್ಲಿಸಿ ಸನ್ನದ್ ಪಡೆದು ಹೈಕೋರ್ಟ ವಕೀಲರಾಗಿ ತಮ್ಮ ವೃತ್ತಿ ಜೀವನವನ್ನು ಅವರು ಪ್ರಾರಂಭಿಸಿದರು.

ತಂದೆಯಿಂದ ಸ್ಫೂರ್ತಿಪಡೆದ ಮಗ ತಂದೆಯ ಜೊತೆಯಲ್ಲಿಯೇ ವೃತ್ತಿಯನ್ನು ಪ್ರಾರಂಭಿಸುವುದು ಸಹಜವಾಗಿದ್ದರೂ ಭಾಷ್ಯಂ ಎಲ್ಲರಂತೆ ಆ ದಾರಿ ಹಿಡಿಯಲಿಲ್ಲ. ಬದಲಾಗಿ ತಂದೆಯ ಸಹೋದ್ಯೋಗಿಗಳೂ ಹಾಗೂ ಆ ದಿನಗಳಲ್ಲಿ ಪ್ರಸಿದ್ಧ ವಕೀಲರೂ ಆಗಿದ್ದ ಶ್ರೀ ಮೋಕ್ಷಗುಂಡಂ ರಾಮಚಂದ್ರರಾಯರು ಭಾಷ್ಯಂ ಅವರ ವಕೀಲಿ ವೃತ್ತಿಯ ಪ್ರಾರಂಭದ ಮಾರ್ಗದರ್ಶಕರಾದರು. ಭಾಷ್ಯಂ ಅವರ ಕೆಲವು ನಿಕಟ ವರ್ತಿಗಳು ಇಂದು ನೆನಪಿಸಿಕೊಳ್ಳುವಂತೆ ಭಾಷ್ಯಂ ತಮ್ಮ ಜೀವನದ ಕೊನೆಯವರೆಗೂ ರಾಮಚಂದ್ರ ರಾಯರು ತಮಗೆ ಪ್ರಾರಂಭದ ದಿನಗಳಲ್ಲಿ ನೀಡಿದ ಮಾರ್ಗದರ್ಶವನ್ನೂ ಮತ್ತು ಪ್ರೋತ್ಸಾಹವನ್ನೂ ಗೌರವದಿಂದ

ಜ್ಞಾಪಿಸಿಕೊಳ್ಳುತ್ತಿದ್ದಂತೆ. ಅಂದಿನ ಮತ್ತೊಬ್ಬ ಪ್ರಸಿದ್ಧ ವಕೀಲರಾದ ಸೋಮಶೇಖರ ರಾಯರ ಜೊತೆಗಿನ ಅವರ ಸಂಬಂಧವೂ ತುಂಬಾ ಆತ್ಮೀಯವಾಗಿತ್ತೆಂದು ದಾಖಲೆಗಳಿಂದ ತಿಳಿದು ಬರುತ್ತದೆ.

ಉತ್ತಮ ವಾಗ್ಮಿ, ನಿಷ್ಠಾವಂತ, ಅಧ್ಯಯನ ಶೀಲ ವಕೀಲ ಹಾಗೂ ಬುದ್ಧಿವಂತ. ಕಾನೂನು ವೃತ್ತಿಗೆ ಹೇಳಿ ಮಾಡಿಸಿದ ಗುಣಗಳನ್ನು ಪಡೆದಿದ್ದ ಭಾಷ್ಯಂ ಸಹಜವಾಗಿಯೇ ಕೆಲವೇ ದಿನಗಳಲ್ಲಿ ಮೈಸೂರು ಪ್ರಾಂತ್ಯದ ಪ್ರಸಿದ್ಧ ವಕೀಲರಲ್ಲಿ ಒಬ್ಬರೆನಿಸಿದರು. ಈ ಸಮಯದಲ್ಲಿ ಅವರ ವಾಕ್ ಚಾತುರ್ಯಕ್ಕೆ ಮರುಳಾದವರಲ್ಲಿ ಕೇವಲ ಕಕ್ಷಿದಾರರು ಮತ್ತು ವಕೀಲರು ಮಾತ್ರವಲ್ಲ ನ್ಯಾಯಾಧೀಶರುಗಳೂ ಇದ್ದರೆಂದಾಗ ವಕೀಲಿ ವೃತ್ತಿಯಲ್ಲಿ ಅವರಿಗಿದ್ದ ಅಸಾಧಾರಣ ಬುದ್ಧಿಶಕ್ತಿ ಮತ್ತು ಪರಿಣತಿಯನ್ನು ನೀವೇ ಊಹಿಸಿಕೊಳ್ಳಿ. ಉಳಿದ ವಕೀಲರುಗಳು ವಾದಿಸಿ ಗೆಲ್ಲುವುದು ಅಸಾಧ್ಯವೆಂದು ತಿಳಿದು ಕೈ ಬಿಟ್ಟಿದ್ದ ಕೆಲವು ಮೊಕದ್ದಮೆಗಳನ್ನು ತಮ್ಮ ತರ್ಕ, ಶ್ರಮ ಮತ್ತು ವಾದ ವೈಖರಿಯಿಂದ ಗೆದ್ದ ಭಾಷ್ಯಂ ಮೈಸೂರು ಪ್ರಾಂತ್ಯದ ವಕೀಲಿ ವೃತ್ತಿಗೆ ಸಂಬಂಧಿಸಿದಂತೆ ಅಪಾರ ಮೆಚ್ಚುಗೆ ಪಡೆದರು. ಪರಿಣಾಮವಾಗಿ ಧನಲಕ್ಷ್ಮಿಯೂ ಮನೆಗೆ ಹರಿದು ಬಂದು ವೈಯುಕ್ತಿಕ ನೆಲೆಯಲ್ಲಿ ಸಾಕಷ್ಟು ಅನುಕೂಲಕರ ವಾತಾವರಣ ದೊರಕಿತು. ವಕೀಲಿ ವೃತ್ತಿಯ ಜೊತೆಗೆ ಉಳಿದ ಸಾಮಾಜಿಕ ರಂಗಗಳ ಕುರಿತೂ ಭಾಷ್ಯಂ ಅವರ ಓದು ಆಳವಾಗಿತ್ತೆಂಬುದನ್ನು ಅವರ ಭಾಷಣಗಳಿಂದ ನಾವು ಮನಗಾಣಬಹುದು. ಹೊಸ ಹೊಸ ವಿಷಯಗಳನ್ನು ಓದಿ ಮನನ ಮಾಡಿಕೊಳ್ಳುವುದೂ ಅಂಥ ವಿಷಯಗಳನ್ನು ಇತರರೊಂದಿಗೆ ಹಂಚಿಕೊಂಡು ವಿಶ್ಲೇಷಣೆ ನಡೆಸುವುದು ಭಾಷ್ಯಂ ಅವರ ಬಹುಕಾಲದ ರೂಢಿ.

ಮದ್ರಾಸಿನಲ್ಲಿ ಕಾನೂನು ಶಿಕ್ಷಣವನ್ನು ಓದುತ್ತಿರುವಾಗ ಭಾಷ್ಯಂ ಅಯ್ಯಂಗಾರ್ ಅವರು ಶ್ರೀ ಪಿ. ವಿ. ರಂಗಸ್ವಾಮಿ ಅಯ್ಯಂಗಾರ್ ಅವರ ಕಣ್ಣಿಗೆ ಬಿದ್ದು ಮುಂದಿನ ಕೆಲವೇ ದಿನಗಳಲ್ಲಿ ಅವರ ಕಣ್ಮಣಿಯಾದದ್ದರಲ್ಲಿ ಆಶ್ಚರ್ಯವೇನಿಲ್ಲ. ರಂಗಸ್ವಾಮಿ ಅಯ್ಯಂಗಾರ್ ಮದ್ರಾಸಿನಲ್ಲಿ 'ಸಾಲ್ಟ್ ಕಮೀಶನರ್' ಆಗಿ ಸೇವೆ ಸಲ್ಲಿಸುತ್ತ ನಿಷ್ಠಾವಂತ ಅಧಿಕಾರಿಯೆಂದು ಹೆಸರು ಪಡೆದರು. ಉನ್ನತ ಹುದ್ದೆಯಲ್ಲಿದ್ದರೂ ಶ್ರೀಸಾಮಾನ್ಯನ ವಿಚಾರಗಳಿಗೆ ಸ್ಪಂದಿಸುವ ಮನೋಧರ್ಮ ಪಡೆದವರು. ಇವರು ಭಾಷ್ಯಂರವರ ವಾಕ್ ಚಾತುರ್ಯ ಹಾಗೂ ಮೇಧಾವಿತನಕ್ಕೆ ಎಷ್ಟು ಮರುಳಾದರೆಂದರೆ ಕೆಲವೇ ದಿನಗಳಲ್ಲಿ ಅವರು ಭಾಷ್ಯಂರವರ ತಂದೆ ಮತ್ತು ಉಳಿದ ಬಂಧುಗಳನ್ನು ಭೇಟಿಯಾಗಿ ಭಾಷ್ಯಂರವರನ್ನು ಅಳಿಯನನ್ನಾಗಿ ಮಾಡಿಕೊಳ್ಳುವ ತಮ್ಮ ನಿರ್ಧಾರವನ್ನು ಪ್ರಕಟಿಸಿದರು. ಅನುರೂಪ ವರ-ಕನ್ಯೆಯರು; ಅನುಕೂಲ ಸಂಬಂಧ; ಜಾತಿ-ಉಪಜಾತಿಗಳಲ್ಲಿಯೂ ಸಾಮ್ಯತೆ. ಎರಡೂ ಕುಟುಂಬಗಳೂ ಈ ಮದುವೆಯ ವಿಚಾರವನ್ನು ಸಂತೋಷದಿಂದ ಒಪ್ಪಿಕೊಂಡವು. ಅಂತೆಯೇ ರಂಗಸ್ವಾಮಿ ಅಯ್ಯಂಗಾರರ ಮುದ್ದಿನ ಒಬ್ಬಳೇ ಮಗಳು ಕಲ್ಯಾಣಿ ಭಾಷ್ಯಂರವರ ಜೀವನ ಸಂಗಾತಿಯಾಗಿ ಕೈ ಹಿಡಿದರು. ಭಾಷ್ಯಂರವರ ಅನುವರ್ತಿಗಳಿಗೆಲ್ಲ ಜೀವನದುದ್ದಕ್ಕೂ ಗೌರವದಿಂದ 'ಕಲ್ಯಾಣಮ್ಮನವರು' ಆದರು.

ಭಾಷ್ಯಂರವರ ದೈಹಿಕ ಚಹರೆಯ ಕುರುತು ಒಂದೆರಡು ಮಾತುಗಳನ್ನು ಹೇಳುವುದು ಉಚಿತ. ನೀಳ ಮೂಗಿನ, ಗೋದಿ ಮೈ ಬಣ್ಣದ, ಎತ್ತರದ ನಿಲುವಿನ, ನೇರ ನಡಿಗೆಯ ಭಾಷ್ಯಂ ತಮ್ಮ ಕಾಲೇಜಿನ ದಿನಗಳಿಂದಲೇ ಆಕರ್ಷಕ ರೂಪ ಉಳ್ಳವರಾಗಿದ್ದರೆಂದು ಅವರ

ಅನುವರ್ತಿಗಳೆಲ್ಲರೂ ಹೇಳುತ್ತಾರೆ. ತಮ್ಮ ನಡೆ-ನುಡಿಗಳಂತೆ ದಿನನಿತ್ಯದ ಚಟುವಟಿಕೆಗಳಲ್ಲೂ ಅಚ್ಚುಕಟ್ಟು. ಯಾವಾಗಲೂ ಹಸನಾದ ಬಿಳಿಯ ಬಟ್ಟೆ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮಿಕಿದ ನಂತರ ತಲೆಯ ಮೇಲೆ ಬಿಳಿಯ ಟೋಪಿ, ಹೆಗಲ ಮೇಲೊಂದು ಸ್ವಚ್ಛ ವಸ್ತ್ರ, ಹಣೆಯ ಮೇಲೆ ದೀರ್ಘ ನಾಮ, ಭಾಷ್ಯಂರವರ ಸುಂದರ ರೂಪಕ್ಕೆ ಕನ್ನಡಿಯಂತೆ ಅವರ ದೊಡ್ಡ ಕಪ್ಪು ಕಣ್ಣುಗಳು, ಆ ಕಣ್ಣುಗಳಲ್ಲಿ ಕಾಣುವ ಹಟ, ಬುದ್ಧಿವಂತಿಕೆ, ಎದುರಾಳಿಯನ್ನು ಸಹಜವಾಗಿಯೇ ಅಳೆಯುವ ಶಕ್ತಿ ಇವೆಲ್ಲವು ಒಮ್ಮೆ ಕಂಡರೆ ನಂತರ ಬಹುಕಾಲ ಮರೆಯುವಂತಿಲ್ಲವೆಂದು ಅವರ ಸ್ನೇಹಿತರು ಹೇಳಿದ್ದಾರೆ. ಭಾಷ್ಯಂ ಅವರ ಗಂಭೀರ ಸುಂದರ ರೂಪಿನ ವಿಷಯದ ಚರ್ಚೆಗಳು ನಾಡಿನ-ವಿಶೇಷತಃ ಬೆಂಗಳೂರಿನ-ಎಲ್ಲ ವಲಯಗಳ ಪ್ರಜೆಗಳ ಅವರ ಕುರಿತಾದ ಮಾತುಗಳಲ್ಲಿ ಪ್ರತಿಫಲಿಸುತ್ತವೆ.

ಉನ್ನತ ನ್ಯಾಯಾಲಯದಲ್ಲಿ ವಕೀಲ ವೃತ್ತಿಯನ್ನು ನಡೆಸುತ್ತಿದ್ದ ಪ್ರಾರಂಭದ ವರ್ಷಗಳಲ್ಲಿಯೇ ಶ್ರೀ ಭಾಷ್ಯಂ ಭಾರತೀಯ ಸ್ವಾತಂತ್ರ್ಯಸಂಗ್ರಾಮದ ಸೆರಗಿನಲ್ಲಿ ಸಿಕ್ಕಿ ಈ ಆಂದೋಲನದಿಂದ ವಿಶೇಷ ಆಕರ್ಷಿತರಾದರು. ಪರಿಣಾಮವಾಗಿ ಯಾವ ವೃತ್ತಿಯಲ್ಲಿ ಮುಂದುವರಿದಿದ್ದರೆ ಹಣ, ಹೆಸರು, ಅಧಿಕಾರಗಳು ತಾವಾಗಿಯೇ ಲಭ್ಯವಾಗಬಹುದ್ದಿತ್ತೋ ಆ ವಕೀಲಿ ವೃತ್ತಿಯಿಂದ ತಾಯ್ನಾಡ ಸೇವೆಯತ್ತ ಭಾಷ್ಯಂ ಸರಿದರು. ೧೯೨೧ರಲ್ಲಿ ಮೊದಲ ಬಾರಿಗೆ ಸತ್ಯಾಗ್ರಹ ಚಳುವಳಿಯಲ್ಲಿ ಭಾಗವಹಿಸುವುದರ ಮೂಲಕ ಭಾಷ್ಯಂ ರಾಜಕೀಯ ರಂಗದಲ್ಲಿ ಪಾದಾರ್ಪಣೆ ಮಾಡಿದರು. ಈ ಘಟನೆ ಬಹುಶಃ ಅವರ ಜೀವನದಲ್ಲಿ ಬೇರೊಂದೇ ಆದ ತಿರುವನ್ನು ತಂದ ಘಟನೆ ಇರಬೇಕು. ಅದುಮಿಕೊಂಡಿದ್ದ ಮಾತೃಭಕ್ತಿಯ ಜ್ವಾಲಾಮುಖಿ ಸಿಡಿದು ಚಿಮ್ಮಲು ಪ್ರಾರಂಭವಾದ ಮೊದಲ ಅವಕಾಶ ಅದಾಗಿರಬೇಕು.

ಇಪ್ಪತ್ತರ ದಶಕವನ್ನು ಭಾರತದ ಇತಿಹಾಸದಲ್ಲಿ, ವಿಶೇಷವಾಗಿ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯಲ್ಲಿ, ಬಹಳ ವಿಶೇಷವಾದ ದಶಕವೆಂದು ಪರಿಗಣಿಸಲಾಗಿದೆ. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ನೇತೃತ್ವದ ಬದಲಾವಣೆ ಜೊತೆಗೆ ಬಾಲಗಂಗಾಧರ್ ತಿಲಕರಂತಹ ವ್ಯಕ್ತಿಗಳ ಅಗ್ನಿಮುಖಿ ಧುರೀಣತ್ವದಿಂದ ಮಹಾತ್ಮಾ ಗಾಂಧಿಯಂತಹ ಶಾಂತಮುಖಿ ನೇತೃತ್ವದ ಬದಲಾವಣೆ ಈ ಸಮಯದಲ್ಲಿ ನಡೆದದ್ದು ಓದುಗರ ಮನದಲ್ಲಿರಲಿ. ಇದರ ಜೊತೆಗೆ ಸ್ವಾತಂತ್ರ್ಯ ಸಂಗ್ರಾಮದ ಗುರಿ, ಸಾಧನಗಳಲ್ಲಿಯೂ ಈ ದಶಕದಲ್ಲಿ ಮಹತ್ತರ ಬದಲಾವಣೆ ಆಗಿದ್ದನ್ನು ನಾವು ಗಮನಿಸಬೇಕಾಗಿದೆ. ಭಾಷ್ಯಂ ಕಾಂಗ್ರೆಸ್ಸಿನ ಸೆಳೆತಕ್ಕೆ ಸಿಕ್ಕಿದ್ದು ಇಂತಹ ತಿರುವಿನ ಸಂದರ್ಭದಲ್ಲಿಯೇ ೧೯೨೨ರಲ್ಲಿ ಕಾಂಗ್ರೆಸ್ಸಿನ ಸದಸ್ಯರಾದರು. ಮೈಸೂರು ಕಾಂಗ್ರೆಸ್ ಸಹ ಈ ಸಮಯದಲ್ಲಿಯೇ ರಾಷ್ಟ್ರೀಯ ಕಾಂಗ್ರೆಸ್ ಸೆಳೆತಕ್ಕೆ ಸಿಕ್ಕಿದ್ದು. ಮೈಸೂರು ಕಾಂಗ್ರೆಸ್ ಈ ಸಮಯದಲ್ಲಿ ಗಾಂಧೀಜಿಯವರ ಸತ್ಯಾಗ್ರಹದ ಪ್ರಖರ ದಾಖಲೆಯ ಪ್ರಭಾವಕ್ಕೆ ಒಳಗಾಗಿ ತನ್ನ ಹೋರಾಟದ ದಿಕ್ಕನ್ನು ಬದಲಾಯಿಸಿಕೊಳ್ಳುವ ಪ್ರಯತ್ನ ನಡೆಸುತ್ತಿತ್ತು. ಭಾಷ್ಯಂ ಈ ಸಮಯದಲ್ಲಿ ಮೈಸೂರು ಪ್ರದೇಶದ ಅವಶ್ಯಕತೆಗಳನ್ನು ಅರಿತ ಹಾಗೂ ರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ಸ್ಪಷ್ಟ ಕಲ್ಪನೆ, ನಿಲುವುಗಳಿದ್ದ ಪ್ರಾಂತೀಯ ಯುವ ಧುರೀಣರಾಗಿ ರೂಪುಗೊಂಡರು. ಜೀವನದ ಕೊನೆಯ ನಿಮಿಷದವರೆಗೂ ನಿಷ್ಠಾವಂತ ಕಾಂಗ್ರೆಸ್ಸಿಗರಾಗಿಯೇ ಉಳಿದರು.

೧೯೨೬ನೆಯ ಇಸವಿಯಲ್ಲಿ ಭಾಷ್ಯಂ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ ನೇಮಕಗೊಂಡರು. ಅಂದಿನಿಂದ ಅವರು ಈ ಸಭೆಯ ಸದಸ್ಯರಾಗಿ ೧೯೩೯ರವರೆಗೂ ಮುಂದುವರಿದರು. ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ ಭಾಷ್ಯಂರವರಿಗೆ ಆ ಸಮಯದಲ್ಲಿ ಮೈಸೂರು ರಾಜ್ಯಕ್ಕೆ ಸ್ವಾತಂತ್ರ್ಯ ಚಳುವಳಿಯ ದೃಷ್ಟಿಯಿಂದ ಅಗತ್ಯವಿದ್ದ ಯುವ ನೇತಾರರ ಹಾಗೂ ಪ್ರಾಂತೀಯ ಸಮಸ್ಯೆಗಳ ಜೊತೆಗೆ ನಿಕಟವಾದ ಸಂಬಂಧ ಬಂತು. ೧೯೨೮ರಲ್ಲಿ ಅವರು ತಮ್ಮ ಮೊದಲ ಗ್ರಂಥವಾದ 'ಹಿಂದೂ ಕಾನೂನಿನಲ್ಲಿ ಮಹಿಳೆಯರು' ಪುಸ್ತಕವನ್ನು ಪ್ರಕಟಿಸಿದರು. ಈ ಚಿಕ್ಕ ಪುಸ್ತಕದಲ್ಲಿ ಮೊಟ್ಟಮೊದಲಬಾರಿಗೆ ಮೈಸೂರು ಪ್ರಾಂತ್ಯದ ನೇತಾರರೊಬ್ಬರು ಮಹಿಳೆಯರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಹಾಗೂ ಕಾನೂನು ದೃಷ್ಟಿಯಲ್ಲಿ ಮಹಿಳೆಯರ ಅಗತ್ಯತೆಗಳನ್ನು ಚರ್ಚಿಸಿದ್ದು ಉಲ್ಲೇಖನೀಯ.

೧೯೨೯ರಲ್ಲಿ ಭಾಷ್ಯಂ ಬೆಂಗಳೂರು ಹತ್ತಿಗಿರಣಿ ಸಂಘವನ್ನು ಸ್ಥಾಪಿಸಿದರು. ಬೆಂಗಳೂರಿನ ಹತ್ತಿಗಿರಣಿಗಳ ಕೆಲಸಗಾರರ ವಿಚಾರದಲ್ಲಿ ಭಾಷ್ಯಂ ಮೊದಲಿನಿಂದಲೂ ಅತ್ಯಂತ ಸಹಾನುಭೂತಿಪರ ಧೋರಣೆ ಹೊಂದಿದವರು. ಈ ಶ್ರಮಿಕ ವರ್ಗವನ್ನು ಸಂಘಟಿಸಿ ಕಾರ್ಮಿಕರ ಜೀವನದ ಮೂಲಭೂತ ಅವಶ್ಯಕತೆಗಳನ್ನು ಪೂರೈಸಲು ಮತ್ತು ಅವರಿಗೆ ಮೂಲಭೂತ ಹಕ್ಕುಗಳನ್ನು ನೀಡಲು ಬೆಂಗಳೂರು ಹತ್ತೀಗಿರಣಿ ಕಾರ್ಮಿಕರ ಸಂಘವನ್ನು ಭಾಷ್ಯಂ ಅತ್ಯಂತ ಪರಿಣಾಮಕಾರಿಯಾಗಿ ಉಪಯೋಗಿಸಿಕೊಂಡರು. ಕಾರ್ಮಿಕರೊಂದಿಗೆ ಭಾಷ್ಯಂರವರಿಗಿದ್ದ ಸಂಬಂಧ ಕುರಿತು ನಂತರ ಚರ್ಚಿಸುತ್ತೇನೆ. ಇದೇ ವರ್ಷ ೧೯೨೯ರಲ್ಲಿ ಮೊಟ್ಟಮೊದಲ ಯುವಜನ ಸಮ್ಮೇಳನದ ಸ್ವಾಗತಾಧ್ಯಕ್ಷರಾಗಿ ಭಾಷ್ಯಂ ಕಾರ್ಯನಿರ್ವಹಿಸಿದರು. ಬೆಂಗಳೂರಿನ ಆ ಕಾಲದ ಪ್ರಸಿದ್ಧ ಕಟ್ಟಡವಾದ 'ಮೆಜೆಸ್ಟಿಕ್ ಥಿಯೇಟರ್' ನಲ್ಲಿ ಈ ಯುವಜನ ಸಮ್ಮೇಳನ ಅತ್ಯಂತ ಯಶಸ್ವಿಯಾಗಿ ಅದ್ದೂರಿಯಿಂದ ನೆರವೇರಿತು. ಸಮ್ಮೇಳನಕ್ಕೆ ಆಹ್ವಾನಿತರಾಗಿದ್ದ ನಾ. ಸು. ಹರ್ಡಿಕರ್, ಕಮಲಾದೇವಿ ಚಟ್ಟೋಪಾಧ್ಯಾಯ ಮುಂತಾದವರನ್ನು ಪೋಲಿಸರು ಪ್ರತಿಬಂಧಕಾಜ್ಞೆಯ ಮೇಲೆ ತಡೆಹಿಡಿದರೂ ಸಮ್ಮೇಳನಕ್ಕೆ ತೊಂದರೆ ಆಗಲಿಲ್ಲ. ಈ ಕಾರ್ಯದಲ್ಲಿ ಭಾಷ್ಯಂ ಅವರಿಗೆ ಬೆಂಗಳೂರು ಹಾಗೂ ಸುತ್ತಮುತ್ತಲಿನ ಪ್ರಾಂತ್ಯದ ಯುವಕರಿಂದ ಸಿಕ್ಕಿದ ಅಭೂತಪೂರ್ವ ಬೆಂಬಲ ಅವರ ಅಂದಿನ ಜನಪ್ರಿಯತೆಗೆ ಸಾಕ್ಷಿ. ಬೆಂಗಳೂರು ಹತ್ತಿಗಿರಣಿ ಕಾರ್ಮಿಕ ಸಂಘದಲ್ಲಿ ಬಹುಪಾಲು ಕಾರ್ಮಿಕರು ತಮಿಳು ನಾಡಿನ ಕಡೆಯಿಂದ ಬಂದವರು. ತಮಿಳು ಮಾತೃಭಾಷೆಯಾಗಿದ್ದ ಭಾಷ್ಯಂ ಈ ಕಾರ್ಮಿಕರ ಜೊತೆಗೆ ತಮಿಳಿನಲ್ಲಿ ಮಾತನಾಡಿದಾಗ, ಭಾಷಣವನ್ನು ತಮಿಳಿನಲ್ಲಿ ಮಾಡಿದಾಗ, ಈ ಕೆಲಸಗಾರರಿಗೆ ಸ್ವಾಭಾವಿಕವಾಗಿ ಆತ್ಮೀಯತೆ ಮತ್ತು ವಿಶ್ವಾಸ ಹೆಚ್ಚಾಗುವದು ಸಹಜ. ಪ್ರಾರಂಭದಲ್ಲಿ ಇಂಗ್ಲೀಷ್ ಮತ್ತು ತಮಿಳಿನಲ್ಲಿ ಮಾತ್ರವೇ ಭಾಷಣಕಾರರಾಗಿದ್ದ ಭಾಷ್ಯಂ ಕ್ರಮೇಣ ಕನ್ನಡದಲ್ಲಿಯೂ ಅಸ್ಖಲಿತ ವಾಗ್ಮಿಗಳೆನಿಸಿಕೊಂಡರು. ಅವರಂತಹ ಉತ್ತಮ ವಾಗ್ಮಿ, ಜನರೊಡನೆ ಸ್ಪಂದಿಸಬಲ್ಲ ಭಾಷಣಕಾರ ಆಧುನಿಕ ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ವಿರಳ. ಆ ಬಗ್ಗೆಯೂ ಸಹ ಮುಂದೆ ಚರ್ಚಿಸುತ್ತೇನೆ.

ಬೆಂಗಳೂರು ಹತ್ತಿಗಿರಣಿ ಕಾರ್ಮಿಕರ ಸಂಘ ಸ್ಥಾಪನೆಯಾದ ವರ್ಷವೇ ಭಾಷ್ಯಂ ಗಿರಣಿಯ ಮಾಲಿಕರ ವರ್ತನೆ, ಶೋಷಣೆ ಮತ್ತು ದಬ್ಬಾಳಿಕೆಗಳನ್ನು ಸಾರ್ವಜನಿಕವಾಗಿ ವಿರೋಧಿಸಿ ಮೂರು ಬಾರಿ ಪೋಲೀಸರ ಬಂಧನಕ್ಕೊಳಗಾದರು. ಆದರೆ ಈ ಎಲ್ಲ ಬಾರಿಯೂ ಅವರ ಬಂಧನಗಳು

ಚಿಕ್ಕ ಅವಧಿಯವಾಗಿದ್ದವು. ೧೯೩೦ರಲ್ಲಿ ಭಾಷ್ಯಂ ಬೆಂಗಳೂರು ಪುರ ಸಭೆಯ ಸದಸ್ಯರೆಂದು ಆಯ್ಕೆಯಾದರು. ಮೂಲತಃ ಕನ್ನಡಿಗನಲ್ಲದ ಒಬ್ಬ ವ್ಯಕ್ತಿ ಕರ್ನಾಟಕದಲ್ಲಿ ಮನೆಮಾಡಿ ಅಲ್ಲಿನ ಕನ್ನಡಿಗರನ್ನು ಪ್ರತಿನಿಧಿಸುವದೆಂದರೆ ಆ ವ್ಯಕ್ತಿಯ ಜನಾನುರಾಗ ಎಷ್ಟಿರಬೇಡ? ಪುರಸಭೆಯ ಸದಸ್ಯತ್ವ ದೊರಕುತ್ತಿದ್ದಂತೆಯೇ ಸತ್ಯಾಗ್ರಹಿಗಳ ಯುವತಂಡವಾದ 'ಜೈ ಮಾರುತಿ ವ್ಯಾಯಾಮ ತಂಡ'ದ ನಾಯಕತ್ವವನ್ನು ಭಾಷ್ಯಂ ವಹಿಸಿಕೊಂಡರು. ಸತ್ಯಾಗ್ರಹಿಗಳನ್ನು ಸಂಘಟಿಸಿ ಸರ್ಕಾರದ ವಿರುದ್ಧ ಪಿತೂರಿಯಲ್ಲಿ ತೊಡಗಿರುವರೆಂಬ ಆಪಾದನೆಯ ಮೇಲೆ ಭಾಷ್ಯಂರವರನ್ನು ಆಗಿನ ಬ್ರಿಟಿಷ್ ಸರ್ಕಾರವು ಕೂಡಲೆ ಬಂಧಿಸಿತು. ೧೯೩೦ರಲ್ಲಿ ರಾಜದ್ರೋಹದ ಗಂಭೀರ ಆಪಾದನೆಯನ್ನು ಎದುರಿಸಿ ಭಾಷ್ಯಂ ಮೂರು ತಿಂಗಳ ಕಾಲ ಸೆರೆಮನೆಗೆ ತಳ್ಳಲ್ಪಟ್ಟರು. ಇದರಿಂದ ಕಿಂಚಿತ್ತೂ ವಿಚಲಿತರಾಗದ ಭಾಷ್ಯಂ ಸೆರೆಮನೆಯಿಂದ ಹೊರಗೆ ಬಂದ ಕೂಡಲೇ ಎಂದಿನಂತೆ ತಮ್ಮ ಸ್ವಾತಂತ್ರ್ಯಸಂಗ್ರಾಮದ ಮಂಚೂಣಿಯ ಚಟುವಟಿಕೆಗಳನ್ನು ಮುಂದುವರಿಸಿದರು. ಪುರಸಭೆಯ ಸದಸ್ಯರಾಗಿ, ಸತ್ಯಾಗ್ರಹಿ ತಂಡಗಳ ನಾಯಕರಾಗಿ, ಕಾರ್ಮಿಕ ಸಂಘಗಳ ನೇತಾರರಾಗಿ ಭಾಷ್ಯಂ ಮಾಡಿದ ಭಾಷಣಗಳು, ಆಡಿದ ಮಾತುಗಳು ಬ್ರಿಟಿಷ್ ಸರ್ಕಾರಕ್ಕೆ ಮತ್ತು ಮೈಸೂರು ಸಂಸ್ಥಾನಕ್ಕೆ ನುಂಗಲಾರದ ತುತ್ತಾಗಿ ಪರಿಣಮಿಸಿದವು. ಅವರ ಆಯ್ದ ಕೆಲವು ಭಾಷಣಗಳನ್ನು ಈ ಪುಸ್ತಕದ ಕೊನೆಯ ಭಾಗದಲ್ಲಿ ಯಥಾವತ್ತಾಗಿ ಪ್ರಕಟಿಸಲಾಗಿದೆ.

ಬ್ರಿಟಿಷ್ ಸರ್ಕಾರದ ಕೈಯಲ್ಲಿ ಅಧಿಕಾರ ಹಾಗೂ ಪೋಲೀಸ್ ಪಡೆಯೇನೋ ಇತ್ತು. ಕಾನೂನು ವ್ಯವಸ್ಥೆಯೂ ಅವರದೇ ಆಗಿತ್ತು. ಆದರೇನು ಮಾಡುವುದು? ಭಾಷ್ಯಂರವರ ಜನತಾಂತ್ರಿಕ ಶಕ್ತಿಯನ್ನು ಇವಿಷ್ಟರಿಂದಲೇ ಕಡೆಗಣಿಸುವಂತಿರಲಿಲ್ಲ. ಪ್ರಚಂಡ ಜನಬೆಂಬಲ, ಪ್ರಖರ ಮಾತಿನ ಶಕ್ತಿ, ತನ್ನ ಸ್ವಾರ್ಥವನ್ನು ತೊರೆದು ಬಡವರ ಬಂಧುವಾಗಿ ಸ್ಪಂದಿಸುವ ಸಾಮರ್ಥ್ಯ ಭಾಷ್ಯಂರವರನ್ನು ಅಪ್ರತಿಮ ಜನನಾಯಕ ಪಟ್ಟಕ್ಕೆ ಏರಿಸಿಬಿಟ್ಟಿದ್ದವು. ಪರಿಣಾಮವೆಂಬಂತೆ ೧೯೩೪ ರಿಂದ ೧೯೩೮ರವರೆಗೆ ಅವರು ಮೈಸೂರು ವಿಧಾನ ಪರಿಷತ್ತಿನ ಸದಸ್ಯರಾಗಿ ಕೆಲಸ ನಿರ್ವಹಿಸಿದರು. ಕಾರ್ಮಿಕ ಸಂಘಟನೆಗಳ ಜವಾಬ್ದಾರಿ ಹಾಗೂ ಸ್ವಾತಂತ್ರ್ಯ ಸಂಗ್ರಾಮದ ಬಿಡುವಿಲ್ಲದ ಸರ್ಕಾರಿ ವಿರೋಧಿ ಚಟುವಟಿಕೆಗಳು ಭಾಷ್ಯಂರವರನ್ನು ಮೈಸೂರು ಪ್ರಾಂತ್ಯದ ಅತ್ಯಂತ ಬೇಡಿಕೆಯ ನಾಯಕನನ್ನಾಗಿ ಮಾರ್ಪಡಿಸಿದವು. ೧೯೩೭ರಲ್ಲಿ ಪ್ರಜಾಪಕ್ಷ ಮತ್ತು ಪ್ರಜಾಮಿತ್ರ ಮಂಡಳಿ ಎರಡು ಸಂಸ್ಥೆಗಳು ಮೈಸೂರಿನ ಐತಿಹಾಸಿಕ ಸಭೆಯಲ್ಲಿ ಒಂದುಗೂಡಿ, ಅದರ ಪರಿಣಾಮವಾದ ಪ್ರಜಾಸಂಯುಕ್ತ ಪಕ್ಷವು ಉದಯವಾಯಿತು. ಅಕ್ಟೋಬರ್ ಒಂಬತ್ತು ೧೯೩೭ರಂದು ಭಾಷ್ಯಂ ಮೈಸೂರು ಸರ್ಕಾರದ ದಬ್ಬಾಳಿಕೆ ಹಾಗೂ ಜನವಿರೋಧಿ ನೀತಿಗಳನ್ನು ಕುರಿತು ಮಾಡಿದ ಭಾಷಣ ಜನರನ್ನು ಎಷ್ಟರಮಟ್ಟಿಗೆ ರೊಚ್ಚಿಬ್ಬಿಸಿತೆಂದರೆ ಸರ್ಕಾರಕ್ಕೆ ಭಾಷ್ಯಂರವರನ್ನು ಜನರಿಂದ ಹೇಗಾದರೂ ಮಾಡಿ ದೂರವಿಡುವುದು ಅನಿವಾರ್ಯವಾಯಿತು. ಪರಿಣಾಮವಾಗಿ ೧೯೩೭ರಲ್ಲಿ ಭಾಷ್ಯಂರವರು ರಾಜದ್ರೋಹದ ಆಪಾದನೆಗೆ ಒಳಗಾಗಿ ನಡು ರಾತ್ರಿಯಲ್ಲಿ ಮೈಸೂರಿನ ಮರ್ಡನ್ ಹೊಟೆಲಿನಲ್ಲಿ ಸೆರೆಹಿಡಿಯಲ್ಪಟ್ಟು ಶ್ರೀ ಕೃಷ್ಣ ಜನ್ಮ ಸ್ಥಾನವನ್ನು ಸೇರಬೇಕಾಯಿತು. ಆದರೆ ಇದರಿಂದ ಇಡೀ ಪ್ರಾಂತ್ಯದ ಜನರು ಕೋಪದಿಂದ ಸಿಡಿದೆದ್ದಾಗ ಸರ್ಕಾರವು ಅನಿವಾರ್ಯವಾಗಿ ಭಾಷ್ಯಂರವರನ್ನು ಉಳಿದ ನಾಯಕರೊಂದಿಗೆ ಬೇಷರತ್ ಬಿಡುಗಡೆ ಮಾಡಲೇಬೇಕಾಯಿತು. ಇದು ಭಾಷ್ಯಂ ಅವರ ಜನಾನುರಾಗಕ್ಕೆ ಇನ್ನೊಂದು ಉದಾಹರಣೆ.

೧೯೩೮ರಲ್ಲಿ ಹುಟ್ಟಿಕೊಂಡ ರಾಜಕೀಯ ಸಂಸ್ಥೆ 'ಮೈಸೂರು ಕಾಂಗ್ರೆಸ್' ಹಾಗೂ ಮೊದಲಿದ್ದ 'ಪ್ರಜಾಪಕ್ಷ' ಇವೆರಡೂ ವಿಲೀನಗೊಂಡಿದ್ದರಿಂದ ಒಗ್ಗೂಡಿದ ಮೈಸೂರು ಕಾಂಗ್ರೆಸ್ ಸದಸ್ಯರ ಸಂಖ್ಯೆ ೬೦ ಸಾವಿರವನ್ನೂ ದಾಟಿತು. ಪರಿಣಾಮವಾಗಿ ಮೈಸೂರು ಕಾಂಗ್ರೆಸ್ ಸ ಹಾಗೂ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಚಟುವಟಿಕೆಗಳೆರಡೂ ಒಟ್ಟು ಸೇರುವುದು ರಾಜ್ಯದ ಮತ್ತು ರಾಷ್ಟ್ರದ ರಾಜಕಾರಣದ ದೃಷ್ಟಿಯಿಂದ ಅತ್ಯಂತ ಅಗತ್ಯವೆನಿಸಿತ್ತು. ೧೯೩೮ರಲ್ಲಿ ಕಾಂಗ್ರೆಸ್ ಧ್ವಜ ಹಿಡಿದು ಸಾವಿರಾರು ಜನ ಜೈಲು ತುಂಬುವ ಸತ್ಯಾಗ್ರಹದಲ್ಲಿ ತೊಡಗಿದಾಗ ಬ್ರಿಟಿಶ್ ಸರ್ಕಾರ ಕಂಗೆಟ್ಟಿತು. ಸಮಸ್ಯೆಗೆ ಉತ್ತರವನ್ನೇ ಕಂಡುಕೊಳ್ಳಲು ಅಸಮರ್ಥರಾದ ಅಧಿಕಾರಿಗಳ ಆಜ್ಞೆಯನ್ವಯ ಪೋಲೀಸರು 'ವಿದುರಾಶ್ವತ್ಥ'ದಲ್ಲಿ ಮುಗ್ಧರಾದ ಯಾತ್ರಿಗಳ ಮೇಲೆ ಗುಂಡು ಹಾರಿಸಿದರು. ಗೋಲಿಬಾರಿನಲ್ಲಿ ಉರುಳಿದ ಹೆಣಗಳು ಜನರನ್ನು ರೋಷತಪ್ತರನ್ನಾಗಿ ಮಾಡಿದವು. ಜನರ ಪ್ರತಿಭಟನೆಯಿಂದ ಮತ್ತಷ್ಟು ಕೈ ಸೋತ ಮೈಸೂರು ಸರ್ಕಾರವು ಮೇ ಹದಿನೇಳು ೧೯೩೮ರಂದು ಕಾಂಗ್ರೆಸ್ಸನ ಜೊತೆಗೆ ಒಪ್ಪಂದ ಮಾಡಿಕೊಂಡಿತು. ಆ ಒಪ್ಪಂದದ ಮೇರೆಗೆ ಎಲ್ಲ ಬಂಧಿತ ರಾಜಕೀಯ ಧುರೀಣರನ್ನೂ ಸರ್ಕಾರವು ಬಿಡುಗಡೆ ಮಾಡಿತು. ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ರಚನೆಗೆ ಇದು ಮೊದಲ ಮಹತ್ವದ ಹೆಜ್ಜೆ ಎನಿಸಿತು. ಈ ಸಮಯದಲ್ಲಿ ಭಾಷ್ಯಂ ಮಾಡಿದ ಮಹತ್ವದ ಭಾಷಣಗಳು, ಅವರು ಪಟ್ಟ ಶ್ರಮ ಅತ್ಯಂತ ಮೇಲ್ಮಟ್ಟದವು ಎನ್ನುವದು ಇಲ್ಲಿ ಗಮನಿಸಬೇಕಾದ ಅಂಶ.

೧೯೩೮ರಲ್ಲಿ ಭಾಷ್ಯಂ ಮೈಸೂರು ಸಂಸ್ಥಾನದ ನ್ಯಾಯಾವಾದಿಗಳ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಗೊಂಡರು. ಆ ಸಂದರ್ಭದಲ್ಲಿ ಅವರು ಮಾಡಿದ ಭಾಷಣ ರಾಷ್ಟ್ರದ ರಾಜಕಾರಣದ ಸಂಬಂಧಿಸಿದಂತೆ ಮಹತ್ವಪೂರ್ಣವೂ, ಅರ್ಥಗರ್ಭಿತವೂ ಆದ ವಿಚಾರಗಳನ್ನು ಒಳಗೊಂಡಿತ್ತು ಏಪ್ರಿಲ್ ೧೯೩೮ರಲ್ಲಿ ಮಂಡ್ಯ ಜಿಲ್ಲೆಯ ಮದ್ದೂರಿನ ಹತ್ತಿರದ ಶಿವಪುರದಲ್ಲಿ ನಡೆದ ರಾಷ್ಟ್ರಕೂಟ ಮತ್ತು ಧ್ವಜ ಸತ್ಯಾಗ್ರಹ ಚಳವಳಿಗಳ ವಿಚಾರಗಳನ್ನು ದಾಖಲಿಸುವುದು ಇಲ್ಲಿ ಬಹಳ ಮುಖ್ಯ. ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯಲ್ಲಿಯೇ ಇದೊಂದು ಮೈನವಿರೇಳಿಸುವ ಘಟನೆ. ಆ ಕಾಲದಲ್ಲಿಯೇ ಹತ್ತು ಸಾವಿರ ರೂಪಾಯಿಗಳಿಗಿಂತ ಹೆಚ್ಚು ಖರ್ಚಾಗಬಹುದಾಗಿದ್ದ ಶಿವಪುರ ರಾಷ್ಟ್ರಕೂಟದ ಸಿದ್ಧತೆಗೆಂದು ಹಗಲು-ರಾತ್ರಿಯೆನ್ನದೇ ದುಡಿದವರಲ್ಲಿ ಭಾಷ್ಯಂ ಅಯ್ಯಂಗಾರ್ ಪ್ರಮುಖರು. ಶಿವಪುರ ಧ್ವಜ ಸತ್ಯಾಗ್ರಹದಲ್ಲಿ ಅಲ್ಲಿ ಅಧ್ಯಕ್ಷಸ್ಥಾನ ವಹಿಸಿದ್ದ ಟಿ. ಸಿದ್ದಲಿಂಗಯ್ಯ ಮತ್ತು ಜೆ.ಓ.ಸಿ. ಯುವಕರಾದ ಎಮ್.ಎನ್. ಜೋಯಿಸರನ್ನು ಪೋಲೀಸರು ಬಂಧಿಸಿ ಮಂಡ್ಯಕ್ಕೆ ಕರೆದೊಯ್ದರು. ಆನಂತರ ಅಲ್ಲಿನ ವಿಷಯ ನಿಯಮಕ ಸಮಿತಿಯ ಅಧ್ಯಕ್ಷತೆಯನ್ನು ಕೆ. ಟಿ. ಭಾಷ್ಯಂ ವಹಿಸಿದರು. ಈ ಬಹಿರಂಗ ಸಭೆಯಲ್ಲಿ ಅನೇಕ ಮಹತ್ವದ ರಾಜಕೀಯ ನಿರ್ಣಯಗಳು ಚರ್ಚಿಸಲ್ಪಟ್ಟವು. ೧೨-೪-೧೯೩೮ ರಂದು ಎಚ್.ಸಿ. ದಾಸಪ್ಪ, ವಿ. ವೆಂಕಟಪ್ಪ ಮತ್ತು ಕೆ.ಸಿ. ರೆಡ್ಡಿಯವರ ದಸ್ತಗಿರಿಯ ನಂತರ ಭಾಷ್ಯಂ ಅವರು ಜನನಾಯಕರಾಗಿ ರಾಷ್ಟ್ರಧ್ವಜದ ಕಾವಲಿಗೆ ಕುಳಿತರು. ಆ ಸಂಜೆಯ ಸಭೆಯ ಅಧ್ಯಕ್ಷತೆ ವಹಿಸಿದ ಅವರು ದೇಶಭಕ್ತಿಯಿಂದ ತುಂಬಿದ ದೀರ್ಘ ಭಾಷಣದಿಂದ ಜನರನ್ನು ಹುರಿದುಂಬಿಸಿದರು. ೧೩-೪-೧೯೩೮ರ ಬೆಳಿಗ್ಗೆ ಧ್ವಜಾರೋಹಣ ಮಾಡಲೆಂದು ವೇದಿಕೆ ಏರಿದ ಭಾಷ್ಯಂರವರನ್ನು ಪೋಲೀಸರು ದಸ್ತಗಿರಿ ಮಾಡಿದರು. ಶಿವಪುರ ಧ್ವಜ ಸತ್ಯಾಗ್ರಹವಲ್ಲಿ ಅಂದು ಬಂಧನಕ್ಕೊಳಗಾದ ಭಾಷ್ಯಂ ಆರು ತಿಂಗಳಕಾಲ ಸೆರೆಮನೆಯ ಶಿಕ್ಷೆ ಅನುಭವಿಸಿದರು.

ಆದರೆ ಈ ಕ್ರಿಯಾತ್ಮಕ ಜೀವಕ್ಕೆ ಸೋಲು ಎಲ್ಲಿಂದ? ಅಂತೆಯೇ ಪುನಃ ೧೯೩೯ರಲ್ಲಿ ರಕ್ಷಣಾ ಕಾನೂನಿನನ್ವಯ ಬಂಧನಕ್ಕೊಳಗಾಗಿ ಪೋಲೀಸರ ಆತಿಥ್ಯವನ್ನು ಅನುಭವಿಸಿ ಕೆಲವು ದಿನಗಳಲ್ಲಿ ಬಿಡುಗಡೆಯಾದರು. ಅದಾಗಿ ಮತ್ತೆ ಕೆಲವೇ ದಿನಗಳಲ್ಲಿ ೧೯೩೯ರಲ್ಲಿಯೇ, ಚಿನ್ನದ ಗಣಿ ಪ್ರದೇಶ ವಿರೋಧಿಸಿದ ಸಂದರ್ಭದಲ್ಲಿ ಮತ್ತೊಮ್ಮೆ ಮೂರು ತಿಂಗಳ ಸೆರೆಮನೆ ವಾಸ ಅವರದಾಯಿತು. ಈ ಬಾರಿ ಕೇವಲ ಬೆಂಗಳೂರಷ್ಟೇ ಅಲ್ಲದೆ ಶಿವಮೊಗ್ಗದ ಜೈಲಿನ ಸವಿಯನ್ನೂ ಮತ್ತೊಮ್ಮೆ ಭಾಷ್ಯಂ ನೋಡಿದರು. ಇವೆಲ್ಲವೂ ಭಾಷ್ಯಂ ಅವರು ಅನುಭವಿಸಿದ ಸೆರೆಮನೆ ವಾಸದ ಶಿಕ್ಷೆಗಳ ತುಣುಕುಗಳಷ್ಟೇ.

ಭಾಷ್ಯಂ ಅವರ ಜನಪ್ರಿಯತೆ ದಿನಗಳೆದಂತೆ ಹೆಚ್ಚುತ್ತಲೇ ನಡೆಯಿತು. ಮಹಾನ್ ಸ್ವಾತಂತ್ರ್ಯವಾದಿಗೆ ಆ ಸಮಯದಲ್ಲಿ ಜನ ತಮ್ಮಲ್ಲಿರುವ ಎಲ್ಲವನ್ನೂ ಅರ್ಪಿಸುವ ಅದ್ಭುತ ಕಾಲವದು. ಜನವರಿ ೨೬, ೧೯೪೦ರಂದು ಮುಂಜಾನೆ ಬೆಂಗಳೂರಿನ ಸುಭಷ್ ನಗರದ ಕೆರೆಯಂಚಿನಲ್ಲಿ ಮೈಸೂರು ಪ್ರಾಂತ್ಯದ ಕಾಂಗ್ರೆಸ್ಸಿನ ನೇತಾರರೆಲ್ಲರೂ ಭಾಷ್ಯಂ ನೇತೃತ್ವದಲ್ಲಿ ಸಭೆ ಸೇರಿದರು. 'ಪೂರ್ಣ ಸ್ವರಾಜ್ಯ'ವನ್ನು ಪಡೆಯಲು ಶಾಂತಿ ಮತ್ತು ಅಹಿಂಸೆಯ ಮಾರ್ಗಗಳನ್ನು ಅನುಸರಿಸುತ್ತೇವೆ ಮತ್ತು ಪೂರ್ಣ ಸ್ವರಾಜ್ಯ ಸಿಗುವವರೆಗೆ ಸ್ವಾತಂತ್ರ್ಯ ಸಂಗ್ರಾಮವನ್ನು ಅಹಿಂಸಾತ್ಮಕ ರೀತಿಯಲ್ಲಿ ಮುಂದುವರಿಸುತ್ತೇವೆಂದು ದೃಢ ಪ್ರತಿಜ್ಞೆಯನ್ನು ಈ ಸಮಯದಲ್ಲಿ ಮಾಡಲಾಯಿತು. ಅದೇ ವರ್ಷ ಶಿವಮೊಗ್ಗದಲ್ಲಿ ನಡೆದ ಮೈಸೂರು ಕಾಂಗ್ರೆಸ್ಸಿನ ವಾರ್ಷಿಕ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಮಾಡಿದ ಭಾಷ್ಯಂ ಅವರ ಭಾಷಣವನ್ನು ಬದುಕುಳಿದ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ಇಂದಿಗೂ ನೆನೆಯುತ್ತಾರೆ. ಆ ವಿಷಯ ಅಂತಹ ಆವೇಶ ಪೂರಿತ, ದೇಶಭಕ್ತಿ ತುಂಬಿದ ಮತ್ತು ಮಹತ್ವದ ವಿಚಾರಗಳನ್ನು ಚರ್ಚಿಸಿದ ಭಾಷಣವದು. ೧೯೪೦ರಲ್ಲಿಯೇ ಮೀರಜ್ ಪ್ರಜಾಪರಿಷತ್ತಿನ ಅಧ್ಯಕ್ಷ ಸ್ಥಾನದಿಂದಲೂ ಭಾಷ್ಯಂ ಮಹತ್ವದ ಸಲಹೆ, ಸೂಚನೆಗಳನ್ನು ನೀಡಿದ್ದನ್ನು ಇಲ್ಲಿ ಸ್ಮರಿಸಬಹುದು.

ಯಾರ ನೌಕರಿಯಿಂದ ಭಾಷ್ಯಂ ಅಯ್ಯಂಗಾರ್ ರವರು ತಮ್ಮ ವೃತ್ತಿ ಜೀವನದಲ್ಲಿ ಪ್ರಾರಂಭಿಸಿದ್ದರೋ, ಯಾವ ವೃತ್ತಿಯಿಂದ ಹೇರಳ ಧನ, ಗೌರವ, ಅಂತಸ್ತುಗಳು ಅವರಿಗೆ ಸಿಗಬಹುದಾಗಿತ್ತೋ ಆ ವಕೀಲಿ ವೃತ್ತಿಯನ್ನು ಭಾಷ್ಯಂ ಬಿಟ್ಟುಕೊಡಬೇಕಾಯಿತು. ೧೯೪೦ರಲ್ಲಿ ಹೈಕೋರ್ಟಿನಿಂದ ಅವರ ವಕೀಲಿ ಸನ್ನದ್ದನ್ನು ಸರ್ಕಾರ ರದ್ದು ಪಡಿಸಿತು. ಸ್ವಾತಂತ್ರ್ಯಕ್ಕೆಂದು ತಮ್ಮ ವೃತ್ತಿಯ ಮಹತ್ವಾಕಾಂಕ್ಷೆಗಳನ್ನು ಹೀಗೆ ಬಲಿಕೊಟ್ಟ ಭಾಷ್ಯಂ ತನ್ನ ಸನ್ನದ್ದಿನ ಅಮಾನತ್ತನ್ನು ನಗು-ನಗುತ್ತ ಸ್ವೀಕರಿಸಿದರು. ದೇಶ ಸೇವೆಗೆ ಕಂಕಣಬದ್ಧರಾಗಿದ್ದ ಅವರಿಗೆ ಹೈಕೋರ್ಟಿನಲ್ಲಿ ವಕೀಲ ವೃತ್ತಿ ನಡೆಸಲು ಅವರಿಗೆ ಸಮಯವಿದ್ದರೆ ತಾನೆ? ರಾಷ್ಟ್ರದ ಮತ್ತು ಪ್ರಾಂತ್ಯದ ರಾಜಕೀಯ ಬದಲಾವಣೆಗಳ ಮಹಾಪೂರದಲ್ಲಿ ಕೊಚ್ಚಿಹೋಗಿದ್ದ ದೇಶಭಕ್ತರಿಗೆ ಇದೊಂದು ಸಮಸ್ಯೆಯೆಂದೇ ಎನಿಸಲಿಲ್ಲ. ಬದಲಾಗಿ ಹೊಸ ಜವಾಬ್ದಾರಿಗಳನ್ನು ನಿರ್ವಹಿಸಲು ಇದು ಅವರಿಗೆ ಅನುವು ಮಾಡಿಕೊಟ್ಟಂತಾಯಿತು. ಅಂತೆಯೇ ೧೯೪೦-೪೧ರಲ್ಲಿ ಭಾಷ್ಯಂ ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಸಾವಿರಾರು ಕಾಂಗ್ರೆಸ್ಸಿಗರನ್ನು ಹುರಿದುಂಬಿಸಿದರು.

ಮುಂದಿನ ದಿನಗಳಲ್ಲಿ ಭಾಷ್ಯಂ ತಾಯ್ನಾಡ ಸೇವೆಯ ಕರೆಯಲ್ಲಿ ಪೂರ್ಣವಾಗಿ ಕರಗಿಹೋದರು. ೧೯೪೧ರಲ್ಲಿ ಬಿನ್ನಿಮಿಲ್ಲಿನ ಕಾರ್ಮಿಕ ಸಂಘದ ಅಧ್ಯಕ್ಷರಾಗಿ ಭಾಷ್ಯಂ ಪುನಃ ಬಂಧನಕ್ಕೊಳಗಾದರು. ಸರ್ಕಾರದಿಂದ ದೇಶದ್ರೋಹ ಅಪರಾಧ, ಆಡಳಿತದ ವಿರುದ್ಧ ಪಿತೂರಿ

ಹಾಗೂ ಜನರ ಭಾವನೆಗಳನ್ನು ಕೆರಳಿಸುವ ಪ್ರಚೋದನಾತ್ಮಕ ಹೇಳಿಕೆಗಳ ಕುರಿತಾಗಿ ಭಾಷ್ಯಂರವರಿಗೆ ಎಚ್ಚರಿಕೆಯ ನೋಟೀಸ್ ನೀಡಲಾಯಿತು. ಹಿಂದಿನ ವರ್ಷಗಳಂತೆ ದೇಶಭಕ್ತರ ಪರವಾಗಿ ಹಾಗೂ ತನ್ನ ಪರವಾಗಿ ನ್ಯಾಯಾಲಯಗಳಲ್ಲಿ ವಾದಿಸುವ ಹಕ್ಕನ್ನು ಈಗ ಭಾಷ್ಯಂ ಕಳೆದುಕೊಂಡರು. ಅಂದಿನ ಸರ್ಕಾರಿ ವಕೀಲರೂ ಕೂಡ ಭಾಷ್ಯಂ ಅವರ ಪರವಾಗಿ ವಾದಿಸಲು ನಿರಾಕರಿಸಿದರೆಂದು ಭಾಷ್ಯಂ ನಿಕಟವರ್ತಿಗಳು ಹೇಳಿದ್ದಾರೆ. ಇದೇ ವರ್ಷ ಪುನಃ ಬಂಧನಕ್ಕೊಳಗಾಗಿ ಎರಡು ದಿನಗಳ ಸೆರೆಮನೆವಾಸ ಮುಗಿಸಿ ಹೊರಬಂದ ಭಾಷ್ಯಂ ಇವೆಲ್ಲವುಗಳಿಂದ ಸ್ವಲ್ಪವೂ ವಿಚಲಿತರಾಗದೆ ರಾಜ್ಯದ ತುಂಬೆಲ್ಲ ಯುವಕರನ್ನು ಹುರಿದುಂಬಿಸುತ್ತ ಓಡಾಡಿದರು. ಇಂಥ ಚೇತನವನ್ನು ಶಿಕ್ಷೆ-ಸೆರೆಮನೆಗಳ ಮೂಲಕ ಹೆದರಿಕೆ ಮಂಕುಗೊಳಿಸುವ ಸರ್ಕಾರದ ವ್ಯರ್ಥ ಪ್ರಯತ್ನಗಳು ಜನರ ನಗೆಪಾಟಲಿಗೆ ಗುರಿಯಾದವು.

೧೯೪೨ನೇ ಇಸ್ವಿಯು ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯಲ್ಲಿ ವಿಶೇಷವಾದ ವರ್ಷ. ಆ ವರ್ಷ ಮಹಾತ್ಮಾಗಾಂಧಿ ಮುಂಬಯಿಯಿಂದ ಚಲೇಜಾವ್ ಚಳುವಳಿಯ ಕರೆ ನೀಡಿದರು. ಮುಂಬಯಿ ಅಧಿವೇಶನಕ್ಕೆ ಭಾಷ್ಯಂ ಮೈಸೂರು ಸಂಸ್ಥಾನದ ಪ್ರತಿನಿಧಿಯಾಗಿ ಹೋಗಿದ್ದರು. ಮಹಾತ್ಮಾಗಾಂಧೀಜಿಯವರ ಚಲೇಜಾವ್ ಸಂದೇಶವನ್ನು ಕನ್ನಡ ಜನಕೋಟಿಗೆಂದು ಹೊತ್ತು ಬೆಂಗಳೂರಿಗೆ ತಿರುಗಿ ಬಂದ ಭಾಷ್ಯಂರವರನ್ನು ಜನತೆ ಭೇಟಿಯಾಗುವ ಮೊದಲೇ ಎಲಹಂಕ ರೈಲು ನಿಲ್ದಾಣದಲ್ಲಿ ಬಂಧಿಸಿ ಸೆಂಟ್ರಲ್ ಜೈಲಿನಲ್ಲಿ ಇಡಲಾಯಿತು. ದೇಶದ ಉದ್ದಗಲಕ್ಕೂ ಜನರು 'ಬ್ರಿಟೀಷರೆ, ಭಾರತಿದಿಂದ ತೊಲಗಿ' ಎಂಬ ವಾಕ್ಯವನ್ನು ಮಂತ್ರದೋಪಾದಿಯಲ್ಲಿ ಜಪಿಸತೊಡಗಿದರು. ಬ್ರಿಟೀಷ್ ಸರ್ಕಾರ ಹಾಗೂ ಸರ್ಕಾರವನ್ನು ಆದರಿಸುವ ಸಂಸ್ಥಾನಗಳು, ಆಳರಸರು, ನವಾಬರು ಜನರಿಂದ ತಿರಸ್ಕಾರಕ್ಕೆ, ತೀವ್ರ ವಿರೋಧಕ್ಕೆ ಒಳಗಾದರು. ಜೈಲಿನಿಂದ ಬಿಡುಗಡೆಯಾದ ನಂತರ ಕೆ.ಟಿ. ಭಾಷ್ಯಂ ಚಲೇಜಾವ್ ಚಳುವಳಿಯಲ್ಲಿ ಕಾಂಗ್ರೆಸ್ ಸ್ವಯಂಸೇವಕರನ್ನು ಒಗ್ಗೂಡಿಸುವ ಮತ್ತು ಸರ್ಕಾರವನ್ನು ಪ್ರತಿರೋಧಿಸುವ ಕಾರ್ಯದ ಮುಂಚೂಣಿಯಲ್ಲಿ ತೊಡಗಿಕೊಂಡರು. ಅವರ ಆ ಸಮಯದ ಭಾಷಣಗಳು ಹಾಗೂ ಕಾರ್ಯಕ್ರಮಗಳು ಬ್ರಿಟೀಷ್ ಸರ್ಕಾರ ಮತ್ತು ಮೈಸೂರಿನ ದಿವಾನರ ಆಡಳಿತವನ್ನು ಎಷ್ಟರಮಟ್ಟಿಗೆ ತೊಂದರೆಗೆ ಈಡು ಮಾಡಿದವೆಂದರೆ ಸರ್ಕಾರಕ್ಕೆ ಭಾಷ್ಯಂ ವಿರುದ್ಧ ಕಠಿಣ ಕ್ರಮ ತೆಗೆದುಕೊಳ್ಳದೆ ಬೇರೆ ದಾರಿ ಉಳಿಯಲಿಲ್ಲ. ಪರಿಣಾಮವಾಗಿ ಸರ್ಕಾರವು ಕೆ.ಟಿ. ಭಾಷ್ಯಂರವರಿಗೆ ಹದಿನಾರು ತಿಂಗಳಿನ ಅವಧಿಯ ಸ್ಥಾನಬದ್ಧತೆ ಶಿಕ್ಷೆಯನ್ನು ವಿಧಿಸಿತು. ಎಂದರೆ ಪರ್ಯಾಯವಾಗಿ ತನ್ನ ಅಸ್ತಿತ್ವವನ್ನು ಹೇಗಾದರೂ ಮಾಡಿ ಉಳಿಸಿಕೊಳ್ಳುವ ಹತಾಶ ಯತ್ನದಲ್ಲಿ ಸರ್ಕಾರವು ತೊಡಗಿಕೊಂಡು ಅಯಶಸ್ವಿಯಾಯಿತು.

೧೯೪೪ರಲ್ಲಿ ಸ್ಥಾನಬದ್ಧತೆ ಶಿಕ್ಷೆಯಿಂದ ಮುಕ್ತರಾದ ಭಾಷ್ಯಂ ಅದೇ ವರ್ಷ ಬೆಂಗಳೂರಿನಲ್ಲಿ ಕಾರ್ಮಿಕ ಸಂಘಗಳ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಅಕ್ಟೋಬರ್ ೨೮, ೧೯೪೫ರಲ್ಲಿ ಕೇರಳದ ಕೇಂದ್ರಸ್ಥಾನವನ್ನು ಪ್ರತಿನಿಧಿಸುವ ಕೊಚ್ಚಿ (ಕೋಚೀನ್) ರಾಜ್ಯದ ಪ್ರಜಾಮಂಡಳಿಯ ಸಮಾವೇಶವು ಇರಿಂಜಲ ಕಾಡು ಎಂಬಲ್ಲಿ ನಡೆಯಿತು. ಈ ಸಮ್ಮೇಳನದ ಅಧ್ಯಕ್ಷರಾಗಿ ಭಾಷ್ಯಂ ಮಾಡಿದ ಭಾಷಣ ಇಂದಿಗೂ ಅತ್ಯಂತ ಪ್ರಗತಿಪರ ಭಾಷಣವೆನಿಸಿದೆ. ತಮ್ಮ ಭಾಷಣದಲ್ಲಿ ಭಾಷ್ಯಂ ಆಗಿನ ಜಾಗತಿಕ ವಿದ್ಯಮಾನಗಳನ್ನು ಅವಲೋಕಿಸಿ ಭಾರತದ ಅಂದಿನ ಸಾಮಾಜಿಕ-ರಾಜಕೀಯ ವಾತಾವರಣವನ್ನು ಮುಕ್ತವಾಗಿ ಹಾಗೂ ಸಾಕಷ್ಟು ವೈಜ್ಞಾನಿಕವಾಗಿ ವಿಶ್ಲೇಷಿಸಿದ್ದಾರೆ. ನಮ್ಮ ದೇಶದ ಭವಿಷ್ಯದ ಸ್ವಚ್ಛ ಚಿತ್ರಣವನ್ನು ಯುವಕರಿಗೆ ನೀಡುತ್ತ ಭಾಷ್ಯಂ ಭಾರತೀಯ ಪರಂಪರೆಯಲ್ಲಿ

ಕಾಣುವ ವೈವಿಧ್ಯತೆಯನ್ನು ದೇಶದ ಐಕ್ಯತೆ ಹಾಗೂ ಸಮಗ್ರತೆಗಳಿಗೆ ಹೇಗೆ ಬಳಸಿಕೊಳ್ಳಬೇಕೆಂಬುದನ್ನು ಸ್ಪಷ್ಟ ಶಬ್ದಗಳಲ್ಲಿ ವಿವರಿಸಿದ್ದಾರೆ. ಸಾಕಷ್ಟು ದೀರ್ಘವಾಗಿ ಮಾಡಿದ ಈ ಭಾಷಣದಲ್ಲಿ ಭಾಷ್ಯಂ ಸ್ವತಂತ್ರಭಾರತದ ವಿವಿಧ ಆಯಾಮಗಳ ಅನೇಕ ಸಾಧ್ಯತೆಗಳನ್ನು ತೆರೆದಿಟ್ಟಿದ್ದಾರೆ. ಆ ಭಾಷಣದ ಹಲವು ಅಂಶಗಳು ಇಂದಿಗೂ ನಾವೆಲ್ಲರೂ ಮನನ ಮಾಡುವಂತಹವು.

೧೯೪೦ರ ದಶಕದ ಈ ಅವಧಿಯಲ್ಲಿ ಭಾಷ್ಯಂ ಅನೇಕ ಕಡೆ ದೇಶದ ಸ್ವಾತಂತ್ರ್ಯ ಹಾಗೂ ಅಭಿವೃದ್ಧಿಯ ಕುರಿತು ಮಾತನಾಡಿದರು. ಮಂಗಳೂರು, ಮೈಸೂರು, ಧರ್ಮಾವರಂ, ಮಾಯವರಂ ಮುಂತಾದ ಕಡೆ ಅವರು ವಿಶೇಷವಾಗಿ ಯುವ ಜನಾಂಗವನ್ನು ಉದ್ದೇಶಿಸಿ ಮಾತಾಡಿದರು. ಅವರ ವಿಚಾರಗಳು ಅನುಭವದಿಂದ ಪಕ್ವವಾದವು. ಶಿಸ್ತು ಸಂಯಮದಿಂದ ಕೂಡಿದಂತಹವು. ಆ ಮಾತುಗಳ ಹಿಂದೆ ನಿಸ್ವಾರ್ಥ ಸೇವೆ ಹಾಗೂ ಜನತೆಗಾಗಿ ಮಾಡಿದ ಅಪಾರ ತ್ಯಾಗ, ಬಲಿದಾನ, ಅನುಭವಿಸಿದ ಯಾತನೆಗಳಿವೆ. ಮೈಸೂರು ಕಾಂಗ್ರೆಸ್ಸಿನ ಧುರೀಣರಲ್ಲಿ ಕೆ. ಟಿ. ಭಾಷ್ಯಂರವರಷ್ಟು ಬಾರಿ ಇನ್ನಾವ ಧುರೀಣರೂ ಕಾರಾಗ್ರಹವಾಸದ ರುಚಿಯನ್ನು ಉಂಡಿರಲಾರರು. ಬೆಂಗಳೂರಿನಲ್ಲಿ, ಮೈಸೂರಿನಲ್ಲಿ, ಶಿವಮೊಗ್ಗಾದಲ್ಲಿ ಹಾಗೂ ರಾಜ್ಯದ ಇನ್ನೂ ಅನೇಕ ಕಡೆಗಳಲ್ಲಿ ಭಾಷ್ಯಂ ತಮ್ಮ ಸತ್ಯಾಗ್ರಹದಿಂದಾಗಿ ದಸ್ತಗಿರಿಯಾಗಿದ್ದರು. ಕೆಲವು ಬಾರಿ ಅವರನ್ನು ಪೋಲೀಸರು ಅತ್ಯಂತ ಹೀನಾಯವಾಗಿ ನೋಡಿಕೊಂಡರಾದರೂ ಇನ್ನೂ ಕೆಲವು ಬಾರಿ ಬ್ಯಾರಿಕ್‌ನಲ್ಲಿ ಅವರ ವಿದ್ಯೆ, ವೃತ್ತಿ ಹಾಗೂ ಅಂತಸ್ತಿಗೆ ತುಸುಮರ್ಯಾದೆಯನ್ನು ಕೊಡಲಾಯಿತೆನ್ನುವುದು ಇದ್ದುದರಲ್ಲಿಯೇ ತೃಪ್ತಿತರುವ ವಿಚಾರ.

೧೯೪೫ರಲ್ಲಿ ಕಾರ್ಮಿಕ ಸಂಘಗಳ ಒಕ್ಕೂಟದ ಸಮ್ಮೇಳನದ ಅಧ್ಯಕ್ಷರಾಗಿ ಭಾಷ್ಯಂ ಮಹತ್ವದ ಪಾತ್ರ ವಹಿಸಿದ್ದರು. ೧೯೪೭ರಲ್ಲಿ ಮೈಸೂರಿನ ಆಗಿನ ಅರಸರಾದ ಜಯಚಾಮರಾಜೇಂದ್ರ ವಾಡಿಯರ್ ರವರು ಜನಾಭಿಪ್ರಾಯಕ್ಕೆ ಮಣಿದು ಮೈಸೂರಿನಲ್ಲಿ ಪ್ರಜಾಪ್ರಭುತ್ವಕ್ಕೆ ದಾರಿ ಮಾಡಿಕೊಟ್ಟರು. ಅಂತೆಯೇ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಯಾದಾಗ ಕೆ. ಟಿ. ಭಾಷ್ಯಂ, ಕೆ. ಚೆಂಗಲ್ ರೆಡ್ಡಿಯವರು ಮುಖ್ಯಮಂತ್ರಿಯಾಗಿದ್ದ ಮಂತ್ರಿಮಂಡಳದಲ್ಲಿ ನ್ಯಾಯಾಂಗ ಸಚಿವರಾಗಿ ನಿಯುಕ್ತಿಗೊಂಡರು. ೧೯೫೨ರವರೆಗೆ ಎಂದರೆ ಸುಮಾರು ಐದು ವರ್ಷಗಳ ಕಾಲ ಸಚಿವರಾಗಿ ಅತ್ಯಂತ ಜವಾಬ್ದಾರಿಯಿಂದ ಕೆಲಸ ಮಾಡಿದ ಭಾಷ್ಯಂ ಹಲವು ಜನಪರ ಹಾಗೂ ಜನೋಪಯೋಗಿ ಕಾನೂನುಗಳನ್ನು ಜಾರಿಯಲ್ಲಿ ತಂದರು. ಅವರು ಜಾರಿಗೊಳಿಸಿದ ಕೆಲವು ಕಾನೂನುಗಳು ಕಾರ್ಮಿಕರ ಜೀವನ ಶೈಲಿ ಮತ್ತು ಜೀವನಾವಕಾಶಗಳಿಗೆ ಮಹತ್ವದ ಸಕಾರಾತ್ಮಕ ಕೊಡುಗೆ ನೀಡಿವೆ; ಕರ್ನಾಟಕದ ಜನತೆ ನೂರಾರು ವರ್ಷ ಅವರ ಕಾರ್ಯಗಳನ್ನು ನೆನೆಯುವಂತೆ ಮಾಡಿವೆ.

ಉದಾಹರಣೆಗೆ ಭಾಷ್ಯಂ ಕಾನೂನು ಸಚಿವರಾಗುವವರೆಗೆ ಅಸಂಘಟಿತ ವಲಯಗಳಲ್ಲಿ ಕಾರ್ಮಿಕರಿಗೆ ವರ್ಷದ ಯಾವುದೇ ದಿನದಲ್ಲಿ ರಜೆ ತೆಗೆದುಕೊಳ್ಳಲು ಅವಕಾಶವೇ ಇರಲಿಲ್ಲ. ಚಹದಂಗಡಿಗಳಲ್ಲಿ, ಹೋಟೆಲ್ಲುಗಳಲ್ಲಿ, ದಿನಸಿ ಅಂಗಡಿಗಳಲ್ಲಿ, ಅಥವಾ ಇನ್ನುಳಿದ ಅಸಂಘಟಿತ

ವಲಯುಗಳ ನೌಕರರಿಗೆ ವಾರದ ಯಾವುದಾದರೊಂದು ದಿನವನ್ನು ದಿನವಾಗಿ ಪರಿವರ್ತಿಸಬೇಕೆಂದು ಭಾಷ್ಯಂರವರ ಸಚಿವಾವಧಿಯಲ್ಲಿ ಕಾನೂನು ತರಲಾಯಿತು. ಇದರಿಂದಾಗಿ ಅಂಗಡಿಗಳು, ಹೊಟೆಲ್‌ಗಳ ಮಾಲೀಕರಿಗೆ ವಾರದ ಒಂದು ದಿನವನ್ನು ರಜಾದಿನವೆಂದು ಘೋಷಿಸುವದು ಅನಿವಾರ್ಯವಾಯಿತು. ಇಂದಿನ ದಿನಗಳಲ್ಲಿ ತೀರ ಸಾಮಾನ್ಯವೆನಿಸಬಹುದಾದ ಇಂಥ ವಿಚಾರವು ಅಂದು ಕೆಲಸಗಾರರ ಜೀವನದಲ್ಲಿ ಅಸಾಧಾರಣ ಬದಲಾವಣೆಗಳನ್ನು ತಂದಿತೆನ್ನುವ ಅಂಶವನ್ನು ನಾವಿಲ್ಲಿ ಗಮನಿಸಬೇಕಿದೆ.

೧೯೪೮ರಲ್ಲಿ ಭಾಷ್ಯಂ ಅಮೇರಿಕದ ಕ್ಯಾಲಿಫೋರ್ನಿಯಾ ರಾಜ್ಯದ ಸ್ಯಾನ್ಫ್ರಾನ್ಸಿಸ್ಕೋ ನಗರದಲ್ಲಿ ನಡೆದ ಅಂತರಾಷ್ಟ್ರೀಯ ಕಾರ್ಮಿಕಸಂಘಗಳ ಸಮಾವೇಶದಲ್ಲಿ ಭಾರತೀಯ ನಿಯೋಗದ ಸದಸ್ಯರಾಗಿ ಭಾಗವಹಿಸಿದರು. ಮತ್ತು ಆ ಸಮ್ಮೇಳನದಲ್ಲಿ ಭಾರತದ ಕಾರ್ಮಿಕ ವರ್ಗಕ್ಕೆ ಸಂಬಂಧಿಸಿದಂತೆ ಅನೇಕ ಮಹತ್ವದ ಅಂಶಗಳನ್ನು ಉಳಿದ ರಾಷ್ಟ್ರಗಳ ಗಮನಕ್ಕೆ ತಂದರು. ೧೯೪೯ರಲ್ಲಿ ಜಿನೇವಾದಲ್ಲಿ ನಡೆದ ಅಂತರಾಷ್ಟ್ರೀಯ ಕಾರ್ಮಿಕ ಸಮ್ಮೇಳನದಲ್ಲಿಯೂ ಭಾಷ್ಯಂ ಭಾರತವನ್ನು ಪ್ರತಿನಿಧಿಸಿದ್ದರು.

ಕೆ. ಟಿ. ಭಾಷ್ಯಂ ೧೯೫೨ರಲ್ಲಿ ಮೈಸೂರು ರಾಜ್ಯ ವಿಧಾನ ಪರಿಷತ್ತಿನ ಅಧ್ಯಕ್ಷರಾಗಿ ಚುನಾಯಿಸಲ್ಪಟ್ಟರು. ವಿಧಾನ ಪರಿಷತ್ತಿನ ಅಧ್ಯಕ್ಷಸ್ಥಾನದಿಂದ ಭಾಷ್ಯಂ ನೀಡಿದ ಅನೇಕ 'ರೂಲಿಂಗ್' ಹಾಗೂ ನಿರ್ಣಯಗಳು ಇಂದಿಗೂ ಆದರ್ಶಪ್ರಾಯವಾಗಿವೆ. ಕಾಂಗ್ರೇಸ್ಸಿನವರಾಗಿದ್ದೂ ಕೂಡ ಭಾಷ್ಯಂ ಉಳಿದ ರಾಜಕೀಯ ಪಕ್ಷಗಳನ್ನು ಅತ್ಯಂತ ಗೌರವದಿಂದ ಹಾಗೂ ವಸ್ತು ನಿಷ್ಠವಾಗಿ ನೋಡಿದರು. ಕೆ. ಟಿ. ಭಾಷ್ಯಂ ಆಳುವ ಪಕ್ಷ ಮತ್ತು ವಿರೋಧ ಪಕ್ಷಗಳ ನಡುವೆ ಮೈತ್ರಿಯನ್ನು ತರುವಲ್ಲಿ ಸದಾ ಶ್ರಮಿಸಿದ ಭಾಷ್ಯಂ ಕಾರ್ಮಿಕರ ಹಿತಾಸಕ್ತಿಗಳ ವಿಷಯಗಳು ಎಂದೂ ಅನಾಸಕ್ತಿ ತೋರಿಸಲಿಲ್ಲ. ಈ ಕುರಿತು ವಿವರಗಳನ್ನು ಮುಂದಿನ ಪುಟಗಳಲ್ಲಿ ಚರ್ಚಿಸಲಾಗಿದೆ.

ಮೈಸೂರು ವಿಧಾನ ಪರಿಷತ್ತಿನ ಅಧ್ಯಕ್ಷರಾಗಿರುವಾಗಲೇ ತಮ್ಮ ೬೧ನೇ ವಯಸ್ಸಿನಲ್ಲಿ ಮೇ ೨೪, ೧೯೫೬ರಂದು ಸಂಜೆ ಕಾರ್ಯಕ್ರಮವೊಂದರಿಂದ ತಿರುಗಿ ಬಂದ ಕೆ. ಟಿ. ಭಾಷ್ಯಂ ಅಯ್ಯಂಗಾರ್ ತಮ್ಮ ಮನೆಯ ಮೆಟ್ಟಿಲು ಹತ್ತಿ ಮನೆಯನ್ನು ಪ್ರವೇಶಿಸುತ್ತಿದ್ದಂತೆಯೇ ತೀವ್ರವಾದ ಹೃದಯಾಘಾತದಿಂದ ವೈಕುಂಠವಾಸಿಗಳಾದರು. ಭಾಷ್ಯಂರವರ ಸಾವಿನ ಸುದ್ದಿಯಿಂದ ಇಡೀ ಬೆಂಗಳೂರು ನಗರವೇ ಶೋಕತಪ್ತವಾಯಿತು. ಬೆಂಗಳೂರಿನ ಜನ ಸಮುದ್ರವೇ ಹರತಾಳ ಆಚರಿಸಿ ಸದ್ಗತಿ ಹೊಂದಿದ ನಾಯಕರಿಗೆ ತನ್ನ ಭಾಷ್ಪಾಂಜಲೀ ಸಲ್ಲಿಸಿತು. ಅವರ ಮೃತ ಶರೀರವನ್ನು ವಾಹನದಲ್ಲಿ ಪುಷ್ಪಗಳ ರಾಶಿಯೊಂದಿಗೆ ನಗರದ ಬೀದಿಗಳಲ್ಲಿ ಮೆರವಣಿಗೆ ಮಾಡಲಾಯಿತು. ಅಗಲಿದ ನಾಯಕನಿಗೆ ಮೈಸೂರು ಪ್ರಾಂತ್ಯವು ಅಶ್ರು ತುಂಬಿದ ವಿಧಾಯ ಹೇಳಿತು.

ಭಾಷ್ಯಂ ಅಯ್ಯಂಗಾರವರು ಬದುಕಿನಲ್ಲಿ ತೋರಿದ ಧೈರ್ಯ ಉತ್ಸಾಹಗಳನ್ನು ಸಾವಿನಲ್ಲಿಯೂ ತೋರಿದವರು. ಇದು ಕೇವಲ ವಿಶೇಷ ವ್ಯಕ್ತಿಗಳಿಗಷ್ಟೇ ಸಾಧ್ಯ. ಅವರ ಒಂದು ಮಾತನ್ನು ಅಂದಿನ ವಿಧಾನ ಪರಿಷತ್ತಿನ ಸದಸ್ಯ ಶ್ರೀ ಡಿ. ವೆಂಕಟರಾಮಯ್ಯ ಉದ್ಧರಿಸಿದ್ದನ್ನು

ಇಲ್ಲಿ ಪ್ರಸ್ತಾಪಿಸುವುದು ಸೂಕ್ತವೆನಿಸುತ್ತದೆ. ಸಾವಿಗೆ ಕೆಲವೇ ದಿನಗಳ ಮೊದಲು ಶ್ರೀ ವೆಂಕಟರಾಮಯ್ಯನವರು ಭಾಷ್ಯಂ ಅಯ್ಯಂಗಾರರವರ ಮನೆಗೆ ಹೋಗಿ ಅವರ ಆರೋಗ್ಯವನ್ನು ವಿಚಾರಿಸಿದರಂತೆ. ಆಗ ಭಾಷ್ಯಂರವರು ಮುಗುಳು ನಗೆ ನಗುತ್ತ

" Shri Venkataramayya, death is the birth-right of every man.

"ಶ್ರೀ ವೆಂಕಟರಾಮಯ್ಯನವರೇ, ಸಾವು ಪ್ರತಿಯೊಬ್ಬ ಮನುಷ್ಯನ ಜನ್ಮಸಿದ್ಧ ಹಕ್ಕು" ಎಂದರಂತೆ. ಇದು ಅವರ ತಾತ್ವಿಕ ವೇದಾಂತದ ದೃಷ್ಟಿಕೋನವನ್ನು ಬಿಂಬಿಸುವಲ್ಲಿ ಒಳ್ಳೆಯ ಉದಾಹರಣೆಯಾಗಿದೆ.

ಮಹಾನ್ ವ್ಯಕ್ತಿಗಳು ಸಾವಿನಲ್ಲೂ ಅಮರತ್ವ ಪಡೆಯುತ್ತಾರೆ. ಅಂತೆಯೇ ಅವರಿಗೆ ಸಾವು ಒಂದು ನಿತ್ಯ ಸತ್ಯವಾಗಿ ಗೋಚರಿಸುತ್ತದೆ. ಸಾಮಾನ್ಯರಿಗೆ ಇಂಥ ಅಸಾಮಾನ್ಯರ ಸಾವಿನ ಕ್ಷಣಗಳು ಪೌರಾಣಿಕ ಕಥೆಗಳೆಂದು ಅನಿಸಿದರೆ ಆಶ್ಚರ್ಯವೇನಿಲ್ಲ. ಭಾಷ್ಯಂ ಅವರ ಕೊನೆಯ ಕ್ಷಣಗಳನ್ನೇ ನೋಡಿ. ಅವರ ನಿಕಟವರ್ತಿ ಸ್ನೇಹಿತ ಲಕ್ಷ್ಮೀನರಸು ಹಾಗೂ ಭಾಷ್ಯಂ ಆ ದಿನ ಒಟ್ಟಾಗಿ ಮನೆಗೆ ಬಂದರು. ಇನ್ನೇನು ಮನೆಯ ಅಂಗಳವನ್ನು ಪ್ರವೇಶಿಸಬೇಕು, ಆಗ ಭಾಷ್ಯಂ ಕ್ಷಣಕಾಲ ನಿಂತು ಲಕ್ಷ್ಮೀನರಸುರವರಿಗೆ ಹೇಳಿದರಂತೆ "ನಾನು ನನ್ನ ದೇವರ ಪೂಜೆಯನ್ನು ಈಗಲೇ ಮಾಡಬೇಕು. ನಾನು ನಾಳೆ ಬದುಕಿರುತ್ತೇನೋ ಗೊತ್ತಿಲ್ಲ". ಹೀಗೆ ಸಾವಿನ ಸ್ಪಷ್ಟ ಮುನ್ಸೂಚನೆ ಪಡೆಯುವದು ಮಹಾಪುರುಷರಿಗಷ್ಟೆ ಅಲ್ಲದೆ ಉಳಿದವರಿಗೆ ಎಲ್ಲಿ ಸಾಧ್ಯ?

ಇಂದು ಭಾಷ್ಯಂ ನಮಗೆಲ್ಲ ಒಂದು ನೆನಪು ಮಾತ್ರ. ಅವರನ್ನು ಕುರಿತು ಮೈಸೂರು ಪ್ರಾಂತ್ಯದ ಸ್ವಾತಂತ್ರ್ಯ ಸಂಗ್ರಾಮದ ಚಾರಿತ್ರಿಕ ವ್ಯಕ್ತಿಯೆಂದು ನಾವು ಓದುತ್ತೇವೆ, ಕೇಳುತ್ತೇವೆ. ಇಂದಿನ ಯುವ ಪೀಳಿಗೆಗೆ ಭಾಷ್ಯಂ ಅಥವಾ ಅವರಂತಹ ಸ್ವಾತಂತ್ರ್ಯ ಯೋಧರ ಕುರಿತು ಮಾಹಿತಿಯೂ ಕಡಿಮೆ, ಅಭಿಮಾನವೂ ಕಡಿಮೆ. ಆದರೆ ಸ್ವಾತಂತ್ರ್ಯದ ಸುಖವನ್ನು ಉಣ್ಣುತ್ತಿರುವ ನಾವೆಲ್ಲ ಚರಿತ್ರೆಯ ವಿದ್ಯಾರ್ಥಿಗಳಾಗಿ ಹಿಂದಿನ ದಶಕಗಳತ್ತ ಕಣ್ಣು ಹಾಯಿಸಿದರೆ, ಭಾಷ್ಯಂ ಅಯ್ಯಂಗಾರರಂತಹ ಧೀಮಂತ ವ್ಯಕ್ತಿಗಳ ತ್ಯಾಗ ತುಸು ಮಟ್ಟಿಗಾದರೂ ಅರ್ಥವಾದೀತು. ಇಂತವರ ಆದರ್ಶಗಳು, ವಿಚಾರಗಳು, ನಂಬಿಕೆಗಳು ಸ್ವತಂತ್ರ ಭಾರತದ ತಳಪಾಯವಾಗಿವೆ. ದೇಶದ ಮುಂದಿನ ಕನಸುಗಳನ್ನು ಹಿಂದಿನ ಈ ಕಣ್ಣುಗಳು ಕಂಡಿವೆ. ನಮಗೆಂದು ಇವನ್ನು ನನಸಾಗಿಸಲು ತಮ್ಮ ಜೀವ ತೆತ್ತಿವೆ.

## ಭಾಗ-2

## ಆಯ್ದ ಕೆಲವು ಪ್ರಮುಖ ಭಾಷಣಗಳು

## (ಸ್ವಾತಂತ್ರ್ಯೋತ್ತರ ಅವಧಿ)

**ನ್ಯಾಯಾಂಗ ಹಾಗೂ ಕಾರ್ಮಿಕ ಸಚಿವರಾಗಿ ವಿಧಾನ ಸಭೆಯಲ್ಲಿ ಮಾಡಿದ ಕೆಲವು ಭಾಷಣಗಳು ಹಾಗೂ ಹೇಳಿಕೆಗಳು: –**

**೧) ದಿನಾಂಕ ಜೂನ್ ೪, ೧೯೪೮ರಂದು ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ಕಾನೂನು ಮತ್ತು ಕಾರ್ಮಿಕ ಸಚಿವರಾಗಿ ನೀಡಿದ ಉತ್ತರ:**

**ಅಧ್ಯಕ್ಷರೇ,** ಈ ಆಯವ್ಯಯದ ಕುರಿತಾಗಿ ಭಾಷಣ ಮಾಡುತ್ತಾ ಅನೇಕ ಮಂದಿ ಸದಸ್ಯರು ವಿದ್ಯುಚ್ಛಕ್ತಿಯ ವಿಚಾರವಾಗಿ ಮಾತನಾಡಿದ್ದಾರೆ. ಕೆಲವು ಮಾನ್ಯ ಸದಸ್ಯರು ಜೈಲುಗಳ ವಿಚಾರವನ್ನೂ ಮಾತನಾಡಿದ್ದಾರೆ. ಕೆಲವನ್ನು ಟೀಕೆಗಳ ರೂಪದಲ್ಲಿ ಮತ್ತು ಕೆಲವನ್ನು ಸಲಹಾ ರೂಪದಲ್ಲೂ ಅವರು ಹೇಳಿರುತ್ತಾರೆ. ಅವುಗಳ ವಿಚಾರ ಮಾತ್ರ ಈಗ ಹೇಳುತ್ತೇನೆ. ವಿದ್ಯುಚ್ಛಕ್ತಿಯ ವಿಚಾರ ಮಾತನಾಡಿ ಕೆಲವರು ಟೆಲಿಫೋನ್‌ಗಳು ಬೇಕೆಂದು ಕೇಳುತ್ತಿದ್ದಾರೆ. ಮತ್ತೆ ಕೆಲವರು ನೀರಾವರಿ ಕೆಲಸಕ್ಕೆ ಪಂಪುಗಳು ಬೇಕೆಂದು ಒತ್ತಾಯ ಪಡಿಸಿದ್ದಾರೆ. ಗ್ರಾಮಾಂತರ ಜನರ ಸಹಾಯದ ಅಭಿವೃದ್ಧಿಗೆ ಹೆಚ್ಚು ಹೆಚ್ಚು ಹಣ ಒದಗಿಸಬೇಕೆಂಬುದೇ ಸರ್ಕಾರದವರ ಅಭಿಪ್ರಾಯ ಆಗಿದೆ. ಪಂಪುಗಳ ಸಹಾಯ ಮತ್ತು ಹೆಚ್ಚು ಹೆಚ್ಚು ಟೆಲಿಫೋನ್‌ಗಳನ್ನು ನೀಡಬೇಕೆಂದು ಕೇಳಿದ್ದಾರೆ. ತಮಗೆಲ್ಲ ತಿಳಿದಹಾಗೆ ಈಗ ಇರುವುದು ಆಟೊಮ್ಯಾಟಿಕ್ ಟೆಲಿಫೋನ್ ವ್ಯವಸ್ಥೆ. ಆ ಬೋರ್ಡಿನಲ್ಲಿ ಎಷ್ಟು ನಂಬರ್‌ಗಳಿರುವವೋ ಅಷ್ಟು ಟೆಲಿಫೋನ್‌ಗಳನ್ನು ಮಾತ್ರ ಕೊಡಲು ಸಾಧ್ಯ. ಹೆಚ್ಚಿಗೆ ಬೇಕೆಂದರೆ ಮತ್ತೊಂದು ಬೋರ್ಡ ಮಾಡಿಸಬೇಕು. ನಾವು ಈಗಾಗಲೇ ಮತ್ತೊಂದು ಬೋರ್ಡಿಗೆ ಆರ್ಡರ್ ಕೊಟ್ಟಿದ್ದೇವೆ. ಅದು ಇಂಗ್ಲಂಡಿನಿಂದ ಬರಬೇಕು. ಅದರಿಂದ ೫೦೦೦ ಟೆಲಿಫೋನ್‌ಗಳನ್ನು ಹೆಚ್ಚಾಗಿ ಕೊಡಬಹುದು. ಈಗ ನಮಗೆ ಇಂಗ್ಲಂಡಿನಿಂದ ಬಂದಿರುವ ವರದಿಯ ಪ್ರಕಾರ ಡಿಸೆಂಬರ್ ಅಥವಾ ಜನವರಿಯ ವೇಳೆಗೆ ೪೦೦ ಟೆಲಿಫೋನ್‌ಗಳನ್ನು ಕೊಡುತ್ತಾರೆ. ಮಿಕ್ಕ ೪೬೦೦ ಟೆಲಿಫೋನ್‌ಗಳು ೧೯೫೦ನೆಯ ಇಸವಿಯ ವೇಳೆಗೆ ಆಗುತ್ತವೆಂದು ತಿಳಿದು ಬಂದಿದೆ. ಇನ್ನು ೨-೩ ವರ್ಷಗಳಲ್ಲಿ ಕಷ್ಟಗಳು ಪರಿಹಾರವಾಗುತ್ತವೆಂದು ನಮ್ಮ ಆಶೆ. ಯುದ್ಧಕಾಲವಾಗಿದ್ದರಿಂದ ಇದುವರೆಗೂ ಪರದೇಶದ ಕೈಗಾರಿಕೆಯವರು ಬರೀ ಯುದ್ಧ ಸಾಮಗ್ರಿಗಳನ್ನು ಮಾತ್ರ ತಯಾರಿಸುತ್ತಿದ್ದರು. ಈಗ ಈ ಕೈಗಾರಿಕೆಗಳನ್ನು ಪುನಃ ಉತ್ಪಾದಿಸುತ್ತಿದ್ದಾರೆ. ೨-೩ ವರ್ಷಗಳಾದರೂ ಕಾಯಬೇಕು. ನಿರಂತರವಾಗಿ ಕೆಲಸ ನಡೆಯುತ್ತಿದೆ. ಮತ್ತು ಟೆಲಿಫೋನ್‌ಗಳನ್ನು ಒದಗಿಸುವ ವಿಚಾರದಲ್ಲಿ ಸುಧಾರಿಸಿಕೊಳ್ಳಬೇಕು. ಡಿಸೆಂಬರ್ ಕಡೆಯ ವೇಳೆಗೆ ೪೦೦ ಟೆಲಿಫೋನ್‌ಗಳನ್ನು ಒದಗಿಸಲಾಗುತ್ತದೆ.

ವ್ಯವಸಾಯಕ್ಕಾಗಿ ವಿದ್ಯುಚ್ಛಕ್ತಿಯನ್ನು ಒದಗಿಸಬೇಕು. ಆದರೆ ಅದಕ್ಕೆ ಟ್ರಾನ್ಸ್‌ಫಾರ್ಮರುಗಳು ಅಗತ್ಯ. ಅದನ್ನು ತಯಾರಿಸುವುದಕ್ಕೆ ಒಂದು ವಿಶೇಷ ತಂತ್ರಜ್ಞಾನಬೇಕು. ಅದು ನಮ್ಮಲ್ಲಿ ಹೆಚ್ಚಾಗಿಲ್ಲ. ಇಂಗ್ಲೆಂಡಿನಿಂದ ಬರಬೇಕು. ಟಾಟಾ ಕಂಪನಿಯವರು ಕೊಂಚ ತಯಾರಿಸುತ್ತಾರೆ. ಅವರು ಇಂಡಿಯಾ ದೇಶಕ್ಕೆಲ್ಲ ಹಂಚಬೇಕು. ಈ ರೀತಿ ಟ್ರಾನ್ಸ್‌ಫಾರ್ಮರುಗಳ ಅಭಾವ ಹೆಚ್ಚಾಗಿ ವಿದ್ಯುಚ್ಛಕ್ತಿ

ಕೊಡಲಾಗಲಿಲ್ಲ. ಜುಲೈ ಮತ್ತು ಆಗಸ್ಟ್ ತಿಂಗಳಲ್ಲಿ ಕೊಂಚ ಮಟ್ಟಿಗೆ ಪರಿಸ್ಥಿತಿ ಉತ್ತಮಗೊಳಿಸಲು ಪ್ರಯತ್ನಗಳು ನಡೆಯುತ್ತಿವೆ. ಗ್ರಾಮಾಂತರ ಪ್ರದೇಶಗಳಿಗೆ ಹೆಚ್ಚಿನ ವಿದ್ಯುಚ್ಛಕ್ತಿಯನ್ನು ಕೊಡುವ ಪ್ರಯತ್ನ ಅಗತ್ಯವಿದೆ. ಆ ವಿಚಾರದಲ್ಲಿ ಸರ್ಕಾರದವರಿಗೂ ಹೆಚ್ಚಿನ ಕಾಳಜಿ ಇದೆಯೆಂದು ಹೇಳುತ್ತೇನೆ. ಉಕ್ಕಿನ ಹಾಗೂ ತಾಮ್ರದ ತಂತಿಗಳು ಸರಿಯಾಗಿ ಸಿಕ್ಕುತ್ತಿಲ್ಲ. ಅದೂ ಒಂದು ಕಾರಣ.

ಕಾರ್ಮಿಕರ ವಿಷಯದಲ್ಲಿ ಒಂದು ಮಾತು. ಕಾರ್ಮಿಕರಿಗೆ ಸಂಬಂಧಪಟ್ಟಂತೆ ಶಾಸನಗಳು ಅನೇಕವಿದೆ. ಫ್ಯಾಕ್ಟರಿ ಆಕ್ಟು ಎಂಬುದಾಗಿದೆ. ಅದನ್ನು ಆಗಿಂದಾಗ್ಗೆ ಬದಲಾಯಿಸಬೇಕಾಗುತ್ತದೆ. ಇಂಟರ್‌ನ್ಯಾಶನಲ್ ಕನ್ವೆನ್‌ಷನ್ ಪ್ರಕಾರ ೮ ಗಂಟೆ ಕಾಲ ಕೆಲಸ ತೆಗೆದುಕೊಳ್ಳತಕ್ಕದ್ದು ಎಂಬುದಾಗಿದೆ. ಹೀಗೆಯೇ ಫ್ಯಾಕ್ಟರಿ ಆಕ್ಟು, ಪೇಮೆಂಟ್ ಆಫ್ ವೇಜಸ್ ಆಕ್ಟು ಮತ್ತು ಷಾಪ್ ಅಸಿಸ್ಟೆಂಟ್ ಆಕ್ಟು ಎಂಬುವಿವೆ.

ಇವುಗಳೂ ಇಲ್ಲಿ ಜಾರಿಯಲ್ಲಿವೆ. ಷಾಪ್ ಅಸಿಸ್ಟಂಟ್ ಆಕ್ಟಿನ ವಿಚಾರದಲ್ಲಿ ಅದು ಇನ್ನೂ ಜಾರಿಗೆ ಬಂದಿಲ್ಲ ಎಂಬುದಾಗಿ ಹೇಳಿದರು. ತಮಗೆಲ್ಲರಿಗೂ ಗೊತ್ತಿರುವಂತೆ ಹೋದ ಜೂನ್ ತಿಂಗಳಲ್ಲಿ ರೂಲ್ಸು ತಯಾರು ಮಾಡಿ ಜಾರಿಗೆ ತಂದಿದ್ದೇವೆ. ಜಾರಿಯಲ್ಲಿದೆ. ಅದು ಕಣ್ಣಿಗೆ ಕಾಣಿಸುವುದಿಲ್ಲ. ಏಕೆಂದರೆ ಒಂದು ವಾರ ಕಳೆದಮೇಲೆ ಅವರು ಅಂಗಡಿಗಳನ್ನು ಮುಚ್ಚುತ್ತಾರೆಯೆ ಇಲ್ಲವೆಂಬುದು ಗೊತ್ತಾಗುವುದಿಲ್ಲ. ಅವರು ಅಂಗಡಿಗಳನ್ನು ಮುಚ್ಚಲೇಬೇಕು, ಒಂದು ವೇಳೆ ಮುಚ್ಚದೇ ಇದ್ದರೆ ಮುಚ್ಚಿಸುತ್ತೇವೆ. ಒಂದು ವಾರದಲ್ಲಿ ಒಂದು ದಿನವಾದರೂ ರಜೆ ಕೊಡಬೇಕು. ಹೋಟಲುಗಳಿಗೂ, ಸಿನೀಮಾಗಳಿಗೂ ಈ ರೂಲ್ಸನ್ನು ಜಾರಿಮಾಡುತ್ತಾರೆ. ಅವರು ಮುಚ್ಚಿರಬೇಕು. ಈ ಶಾಸನಗಳಿಂದ ಕಾರ್ಮಿಕರು ಅನುಕೂಲಗಳನ್ನು ಅನುಭವಿಸುತ್ತಾರೆ. ಇನ್ನೂ ಕೆಲವು ಮಸೂದೆಗಳಿವೆ. ಅವನ್ನೂ ತಮ್ಮ ಮುಂದೆ ತರುತ್ತೇವೆ. ಇನ್‌ಷ್ಯೂರೆನ್ಸು , ಹೌಸಿಂಗ್ ಬಿಲ್ ಮತ್ತು ಲೇಬರ್ ಬಿಲ್ ಇತ್ಯಾದಿಯಾಗಿ ತಮ್ಮ ಮುಂದೆ ಬರುತ್ತವೆ. ಆ ಶಾಸನಗಳಿಗೆ ತಮ್ಮ ಒಪ್ಪಿಗೆ ಕೊಟ್ಟು ಕಾರ್ಮಿಕರಿಗೆ ಸಹಾಯಮಾಡಿ ನಮ್ಮ ದೇಶದ ಕೈಗಾರಿಕೆ ಅಭಿವೃದ್ಧಿಯಾಗುವಂತೆಯೂ ಕಾರ್ಮಿಕರು ಸಂತುಷ್ಟರಾಗುವಂತೆಯೂ ಮಾಡತಕ್ಕದ್ದು ತಮ್ಮ ಕೈಯಲ್ಲಿದೆ. ಈ ವಿಷಯದಲ್ಲಿ ಒಂದು ಮಾತು ಏನೆಂದರೆ ಕೇವಲ ಇಂಡಸ್ಟ್ರಿಯಲ್ ಲೇಬರ್ ಎಂಬುದಾಗಿ ಹೇಳುತ್ತಿರುವ ಗಿರಣಿಯಲ್ಲಿ ಕೆಲಸ ಮಾಡತಕ್ಕವರು ಒಬ್ಬರೇ ನಮ್ಮ ಗಮನದಲ್ಲಿದ್ದಾರೆ ಎಂಬುದಾಗಿ ಭಾವಿಸಬಾರದು. ಗ್ರಾಮಾಂತರಗಳಲ್ಲಿ ವ್ಯವಸಾಯ ಮಾಡಿ ಕೂಲಿ ಮಾಡಿ ಜೀವನ ಮಾಡತಕ್ಕವರೂ ನಮ್ಮ ಗಮನದಲ್ಲಿ ಹೆಚ್ಚು ಹೆಚ್ಚಾಗಿ ಇದ್ದಾರೆ. ಅವರ ವಿಷಯವೂ ಹೆಚ್ಚಾಗಿ ನಮ್ಮ ಗಮನದಲ್ಲಿದೆ. ಹಿಂದಿನಿಂಲೂ ಅವರನ್ನು ಮರೆತಿದ್ದಾರೆ ಎಂಬುದನ್ನು ಮನಗಂಡಿದ್ದೇವೆ. ಪ್ಲಾಂಟೇಷನ್ ಲೇಬರ್ ವಿಷಯದಲ್ಲಿಯೂ ಸಹ ಬಹಳ ಕಷ್ಟ ಪಡತಕ್ಕ ಜನರಿದ್ದಾರೆ. ಅವರ ವಿಷಯವನ್ನೂ ಗಮನಕ್ಕೆ ತೆಗೆದುಕೊಳ್ಳುತ್ತೇವೆ. ಇವೆಲ್ಲವೂ ಸಹ ಆಗಬೇಕಾದರೆ ನಿಮ್ಮ ಸಹಾನುಭೂತಿ ಅತ್ಯವಶ್ಯಕ. ತಮ್ಮ ಸಹಾನೂಭೂತಿ ಇದ್ದರೆ ಇದೆಲ್ಲವನ್ನು ಸರಿಪಡಿಸುವುದಕ್ಕಾಗುತ್ತದೆ.

ಜೈಲಿನ ವಿಷಯದಲ್ಲಿ ಒಂದು ಮಾತು. ನಾವು ಬಂದ ಮೇಲೆ ಜೈಲಿನಲ್ಲಿರೊ ಬಂದಿಗಳಲ್ಲಿ ಬಹುಕಾಲದಿಂದಲೂ ಖಾಯಿಲೆಯಿಂದ ನರಳುತ್ತಿದ್ದ ಖೈದಿಗಳನ್ನು ಬಿಡುಗಡೆ ಮಾಡಿದ್ದೇವೆ. ೮-೧೦ ವರ್ಷಗಳಿಂದ ಇದ್ದವರಲ್ಲಿ ಕೊಂಚ ದಿನ ಆದಮೇಲೆ ಒಳ್ಳೆಯ ನಡತೆಯಿಂದ

ಗುಣಶೀಲರಾಗಿ ಕಂಡುಬಂದರೆ ಅವರಿಗೆ ಸ್ವಲ್ಪ ಮಾಫಿ ಮಾಡಿ ಬಿಡುಗಡೆ ಮಾಡುವ ಬಗ್ಗೆ ಒಂದು ಸಲಹಾ ಸಮಿತಿಯನ್ನು ಏರ್ಪಡಿಸಿದೆ. ಅವರು ಯಾರು ಯಾರನ್ನು ಬಿಡಬಹುದೆಂದು ಶಿಫಾರಸ್ಸು ಮಾಡುತ್ತಾರೋ ಅವರನ್ನು ಬಿಡುತ್ತೇವೆ.

ಜೈಲುಗಳಿಂದ ಬಿಡುಗಡೆ ಮಾಡಲ್ಪಟ್ಟ ಖೈದಿಗಳು ಜೈಲಿನಿಂದ ಹೊರಗೆ ಹೋದ ತಕ್ಷಣ ಅವರಿಗೆ ಜೀವನೋಪಾಯಕ್ಕೆ ಮಾರ್ಗವಿರುವುದಿಲ್ಲ. ಪುನಃ ಯಾವುದಾದರೂ ತಪ್ಪಿಗೆ ಸಿಕ್ಕಿ ಕೊಳ್ಳುತ್ತಾರೆ. ಆದ್ದರಿಂದ ಅಂಥವರಿಗೆ ಯಾವುದಾದರೂ ಕೈಗಾರಿಕೆಯನ್ನು ಕಲಿಸಿಕೊಟ್ಟು ಗೌರವದಿಂದ ಜೀವನಮಾಡುವುದಕ್ಕೆ ಮಾರ್ಗವನ್ನು ಕಲ್ಪಿಸುವುದಕ್ಕಾಗಿ ಮಧ್ಯ ಒಂದು ಗಂಟೆ ಕಾಲ ಜೈಲಿನಿಂದ ಹೊರಗಡೆ ಕೆಲಸ ಮಾಡುವುದಕ್ಕೆ ಏರ್ಪಾಡು ಮಾಡಲಾಗಿದೆ. ಜೈಲಿನಲ್ಲಿ ಅನ್ನ ಬಟ್ಟೆ ಮತ್ತು ಅವರಿಗೆ ಅನುಕೂಲವಾದ ವಾತಾವರಣ ಇವುಗಳನ್ನೆಲ್ಲ ಕಲ್ಪಿಸಬೇಕಾಗಿದೆ. ಅಲ್ಲಿ ಡೆಟನ್ಯೂಗಳೂ ಇದ್ದಾರೆ. ಅವರ ವಿಷಯದಲ್ಲಿ ಒಂದು ಮಾತು. ಅವರಿಗೆ ಪ್ರತ್ಯೇಕವಾಗಿ ಆಹಾರ ಬಟ್ಟೆ ಇವುಗಳ ವ್ಯವಸ್ಥೆಯನ್ನೂ ಮಾಡಿದ್ದೇವೆ. ಮತ್ತೂ ಅವರಿಗೆ ವರ್ತಮಾನ ಪತ್ರಿಕೆಗಳನ್ನು ಕೊಡುವುದಕ್ಕೂ ಏರ್ಪಾಡುಮಾಡಿದೆ. ವಿಶ್ವ ಕರ್ನಾಟಕ ಪತ್ರಿಕೆ ಕೊಡಲಿಲ್ಲವೆಂದು ಶ್ರೀಮಾನ್ ಮುಲ್ಕ ಗೋವಿಂದ ರೆಡ್ಡಿಯವರು ಹೇಳಿದರು. ಅವರು ಯಾವ ಪತ್ರಿಕೆಯನ್ನಾದರೂ ತರಿಸಿಕೊಳ್ಳಬಹುದು. ಅದಕ್ಕೆ ನಾವು ಅಭ್ಯಂತರವೇನೂ ಮಾಡಿಲ್ಲ. ನಾವು ಎರಡು ದಿನ ಪತ್ರಿಕೆಗಳನ್ನು ಮಾತ್ರ ಕೊಡುತ್ತೇವೆ. ಅದಕ್ಕಿಂತ ಹೆಚ್ಚಾಗಿ ಕೊಡುವುದಕ್ಕೆ ಆಗುವುದಿಲ್ಲ. ಅವರೇ ಬೇಕಾದರೆ ದುಡ್ಡು ಕೊಟ್ಟು ವಿಶ್ವಕರ್ನಾಟಕ ಪತ್ರಿಕೆಯನ್ನು ತೆಗೆದುಕೊಳ್ಳಬಹುದು. ನಮ್ಮ ಅಭ್ಯಂತರವೇನೂ ಇಲ್ಲ.

**೨) ದಿನಾಂಕ ಅಕ್ಟೋಬರ್ ೧೩, ೧೯೪೮ರಂದು ಮೈಸೂರು ಸಂಸ್ಥಾನದಲ್ಲಿ ಅಧಿಕ ಲಾಭಗಳ ತೆರಿಗೆಯನ್ನು ವಿಧಿಸುವುದಕ್ಕೆ ಸಂಬಂಧಪಟ್ಟ ತಿದ್ದುಪಡಿ ಕಾನೂನಿನ ಮೇಲಿನ ಭಾಷಣ:**

೧೯೪೬ನೇ ಇಸವಿಯಲ್ಲಿ ಅಧಿಕಲಾಭ ಹೊಂದಿರತಕ್ಕವರ ಮೇಲೆ ತೆರಿಗೆಯನ್ನು ಹಾಕುವುದಾಗಿ ಒಂದು ಮಸೂದಾ ಕಾನೂನನ್ನು ನಾವು ಮಾಡಿದೆವು. ಅಂಥ ತೆರಿಗೆಯಲ್ಲಿ ಕೆಲವು ಸಂದರ್ಭಗಳಲ್ಲಿ ೧/೩ ಭಾಗವನ್ನು ಅವರಿಗೆ ವಾಪಸ್ಸು ಕೊಡಬಹುದಾಗಿ ಆ ಮಸೂದಾ ಕಾನೂನಿನ ನಾಲ್ಕನೆಯ ಪ್ರಕರಣದಲ್ಲಿ ಅಡಕವಾಗಿದೆ. ಅಂತಹ ವಾಪಸ್ಸು ಕೊಡತಕ್ಕ ತೆರಿಗೆಗೆ ಕಾಲ ನಿಷ್ಕರ್ಷೆ ಮಾಡಿದೆ. ಎಂದರೆ ಈ ಅವಧಿ ಯಾವಾಗ ಪರಿಸಮಾಪ್ತಿಯಾಗುವುದೋ ಆ ದಿನದಿಂದ ಎರಡು ವರ್ಷದವೊಳಗಾಗಿ ಆ ೧/೩ ಭಾಗವನ್ನು ವಾಪಸ್ ಕೊಡಬಹುದೆಂಬುದಾಗಿ ನಿರ್ಧಿಷ್ಟವಾದ ಸಮಯವನ್ನು ಸೂಚಿಸಿದೆ. ೧೯೪೬ನೆಯ ಏಪ್ರಿಲ್ ಒಂದನೇ ತಾರೀಖಿಗೆ ಯುದ್ಧ ಪರಿಸಮಾಪ್ತಿಯಾಗಿ ಆ ಸರ್ಕಾರಿ ಪ್ರಕಟಣೆ ಆಯಿತು. ಎಂದರೆ ೧೯೪೮ರ ಏಪ್ರಿಲ್ ಒಂದನೆಯ ತಾಲೀಖಿನ ಒಳಗೆ ಆ ೧/೩ ಭಾಗವನ್ನು ಕೊಡತಕ್ಕದ್ದು ಎಂಬುದು ನಿಗದಿತವಾಯಿತು. ಆದರೆ ಹಾಗೆ ತೆರಗೆಯನ್ನು ವಿಧಿಸಿದ ಇನ್ನೂ ಕೆಲವು ಸಂದರ್ಭದಲ್ಲಿ ಹಾಗೆಯೇ ಉಳಿದವರು ಲೆಕ್ಕಗಳನ್ನು ಪರಿಶೀಲನೆ ಮಾಡುತ್ತಿದ್ದಾರೆ. ಕೆಲವರು ಅಕೌಂಟ್ಸ್ ಕೊಡುತ್ತಿದ್ದಾರೆ. ಹೀಗೆ ಅನೇಕ ವಿಷಯದಲ್ಲಿ ಇನ್ನೂ ಆ ತೆರಿಗೆಯನ್ನು ವಸೂಲಿ ಮಾಡಬೇಕಾಗಿದೆ. ಕೆಲವು ಇನ್ನೂ ಇತ್ತೀಚೆಗೆ ವಸೂಲಿ ಮಾಡಲಾಗಿದೆ. ೧೯೪೮ನೆಯ ಇಸವಿ ಏಪ್ರಿಲ್ ಒಂದರಿಂದ ೧/೩ ಭಾಗ ವಾಪಸ್ ಮಾಡುವುದಕ್ಕೆ ಅವಕಾಶವಿತ್ತು. ಆದ್ದರಿಂದ ಆಗ ಈ ತಿದ್ದುಪಡಿ ಮಸೂದೆ ಕಾನೂನನ್ನು ತಂದರು. ಏಕೆಂದರೆ

2176-4

ಯಾವಾಗ ಈ ಅಧಿಕ ಲಾಭ ವಿಶೇಷ ತೆರಿಗೆಯನ್ನು ಸರ್ಕಾರದವರು ಪಾವತಿಸುತ್ತಾರೋ ಆ ಕಾಲದಿಂದ ಒಂದು ವರ್ಷದವರೆಗೆ ಅವರಿಗೆ ಈ ೧/೩ ಭಾಗ ಯಾವಯಾವ ಸಂದರ್ಭದಲ್ಲಿ ಸಲ್ಲಬೇಕೆಂದು ಹೇಳುತ್ತಿದ್ದೆವೋ ಆ ಸಂದರ್ಭದಲ್ಲಿ ಸಲ್ಲಬಹುದು ಎಂಬುದಕ್ಕೆ ಈ ಒಂದು ತಿದ್ದುಪಡಿಯನ್ನು ತರಲಾಗಿದೆ. ೧೯೪೯ನೆಯ ಇಸವಿ ಏಪ್ರಿಲ್ ಒಂದಕ್ಕೆ ಸಮಯ ಮುಗಿಯುತ್ತದೆ. ಆದಕಾರಣ ಈ ತಿದ್ದುಪಡಿಯನ್ನು ತಂದಿದ್ದೇವೆ. ಇದು ಜರೂರಾತಿ ಕಾನೂನು. ಸಂದರ್ಭಕ್ಕನುಸಾರವಾಗಿ ಆಗಲೇ ಇದನ್ನು ಪ್ರಾರಂಭಿಸಲಾಗಿದೆ. ಈಗ ತಮ್ಮ ಅನುಮತಿ ಪ್ರಕಾರ ಜಾರಿಗೆ ತರಬೇಕೆಂಬುದೇ ನಮ್ಮ ಅಭಿಪ್ರಾಯ.

**೩) ದಿನಾಂಕ ೧೩-೧೦-೧೯೪೮ರಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ಕೈಗಾರಿಕಾ ಕಾರ್ಮಿಕ ನಿಬಂಧನೆ ಮಸೂದೆಯನ್ನು ಕುರಿತು ಮಾಡಿದ ಭಾಷಣ:**

ಈ ಮಸೂದನೆಯ ವಿಚಾರದಲ್ಲಿ ಬಹಳ ವಿಪುಲವಾಗಿ ಚರ್ಚೆಯಾಗಿದೆ. ಇದರಿಂದ ವಯುಕ್ತಿಕವಾಗಿ ನನಗೆ ಒಂದು ಅಂಶ ವ್ಯಕ್ತಪಡುತ್ತದೆ. ಅದೇನೆಂದರೆ, ಇದುವರೆಗೂ ಕೆಲಸಗಾರರ ವಿಚಾರದಲ್ಲಿ ದೇಶದಲ್ಲಿ ಜನರು ಇಷ್ಟು ಆಸಕ್ತಿಯನ್ನು ತೋರಿಸಿರಲಿಲ್ಲ. ಈಗ ಕಾರ್ಮಿಕರಾರು, ಬಂಡವಾಳಗಾರರಾರು ಎಂಬುದನ್ನು ತಿಳಿಯದೇ ಇರುವವರೂ ಕೂಡ ಇಷ್ಟೊಂದು ಸ್ನೇಹದಿಂದ ಮಾತನಾಡುವುದನ್ನು ನೋಡಿ ನನಗೆ ಎಷ್ಟೋ ಸಂತೋಷವಾಗುತ್ತದೆ. ಇದನ್ನು ಹೀಗೆಯೇ ಬೆಳಸಿಕೊಂಡು ಬರಲು ಕಾರ್ಮಿಕರಿಗೆ ಅನುಕೂಲವಾದ ಕಾನೂನುಗಳನ್ನು ಮಾಡುವುದಕ್ಕೆ ತಾವೆಲ್ಲರೂ ಸಹಾಯಮಾಡಬೇಕೆಂದು ಪ್ರಾರ್ಥಿಸಿ, ಪ್ರಕಟಿತ ಮಸೂದೆಯ ವಿಚಾರದಲ್ಲಿ ಒಂದೇ ಒಂದು ಮಾತು ಹೇಳುತ್ತೇನೆ.

ಈಗ ಕಾರ್ಮಿಕರಿಗಿರುವ ಅಧಿಕಾರವನ್ನೇನೂ ಕಿತ್ತುಕೊಂಡಿಲ್ಲ. ಲೇಬರ್ ಕಾನೂನಿನ ಏಳನೆಯ ಪ್ರಕರಣ ಮತ್ತು ಇತರ ಪ್ರಕರಣಗಳಲ್ಲಿ ಖಾಸಗಿ ಜನರನ್ನು ಸೇರಿಸಿಕೊಳ್ಳಬಹುದು. ನಿಬಂಧನೆ ಏನಿರಬೇಕೆಂಬುದನ್ನು ಅವರವರೇ ತೀರ್ಮಾನ ಮಾಡಬಹುದೆಂದಿತ್ತು. ಈ ವಿಚಾರದಲ್ಲಿ ಸರ್ಕಾರದವರೇ ನಿಯಮಗಳನ್ನು ಮಾಡಬಹುದೆಂದಿದೆ. ಅದರಂತೆ ಮಾಡಿದರು. ಅದರಲ್ಲಿ ಯಾರಾದರೂ ಇಬ್ಬರು ಗೌರವ ಸದಸ್ಯರಾಗಿರಬಹುದೆಂಬುದು ಸ್ಪಷ್ಟವಾಗಿ ಸೂಚನೆಯಾಗಿತ್ತು. ಆದರೆ ನಿಯಮ ರೂಪದಲ್ಲಿರುವದು ನಿರ್ಭಂಧಪಡಿಸುತ್ತದೆಯೋ ಇಲ್ಲವೋ ಎಂಬ ಶಂಕೆ ಹುಟ್ಟಿದೆ. ಜನಾಬ್ ಮೀರ್ ನೂರ್ ಹುಸೇನ್‌ರವರು ಹೇಳಿದ ಹಾಗೆ ಕೋರ್ಟಿಗೆ ಹೋಗಬಹುದು. ಹಾಗೆ ಕಾರ್ಮಿಕರು ಕೋರ್ಟಿಗೆ ಹೋಗಿ ವೃಥಾ ಹಣ ಖರ್ಚು ಮಾಡುವುದು ನ್ಯಾಯವಲ್ಲವೆಂದು ನಾವು ಸ್ಪಷ್ಟವಾಗಿ ಸರ್ಕಾರಿ ಅಧಿಕಾರಿಗಳಿರಬೇಕೆಂದು ಕಾನೂನಿನಲ್ಲೆ ಇರಬೇಕೆಂಬ ಉದ್ದೇಶದಿಂದ ಈ ಮಸೂದೆಯನ್ನು ತಂದೆವು. ಇದರಲ್ಲಿ ಅಶೋಕ್ ಮೆಹತಾರವರ ವಿಚಾರವೇ ಬರುವುದಿಲ್ಲ. ಯಾರೊಬ್ಬರನ್ನು ದೂರಿಕರಿಸಬೇಕೆಂಬ ಉದ್ದೇಶವಾಗಲಿ ನಮಗಿಲ್ಲ. ಸರ್ವಸಾಧಾರಣವಾಗಿ ಈ ತೀರ್ಮಾನವನ್ನು ಸರ್ಕಾರದವರು ಮಾಡಿದರು. ಖಾಸಗೀ ಉದ್ಯಮಗಳಲ್ಲಿ ಇಬ್ಬರು ಸರ್ಕಾರಿ ಸದಸ್ಯರಿರಬಹುದೆಂದು ಮಾಡಿದ್ದೇವೆ. ನಿಯಮಗಳಲ್ಲಿರುವುದನ್ನು ಕಾನೂನಾಗಿ ಮಾಡಿದರೆ ಉತ್ತಮವೆಂಬ ಅಭಿಪ್ರಾಯದಿಂದ ಈ ಮಸೂದೆಯನ್ನಿಟ್ಟಿದ್ದೇವೆ. ಈಗ ನಿಯಮವಾಗಿ ಏನು ಜಾರಿಯಲ್ಲಿರುತ್ತದೆಯೋ ಅದನ್ನೇ ಪುನಃ ಕಾನೂನಾಗಿ ಜಾರಿಮಾಡಬೇಕೆಂದು ಕೇಳುತ್ತಿದ್ದೇವೆ. ಸರ್ಕಾರಿ ಉದ್ಯಮಗಳಲ್ಲಿಯೂ ಖಾಸಗಿ ಜನರನ್ನೇ ಇಟ್ಟುಕೊಳ್ಳಬೇಕೆಂಬುದು ಕೆಲವರ ಅಭಿಪ್ರಾಯ.

ಅದನ್ನು ಬೇರೆ ಯೋಜನೆ ಮಾಡಬಹುದು; ಭಿನ್ನಾಭಿಪ್ರಾಯವಿರಬಹುದು; ಈಗ ಕಾಲ ಬಹಳ ವ್ಯತ್ಯಾಸವಾಗಿದೆ. ಮಿಸ್ಟರ್ ಲಿಂಡ್ಸೆಯವರು ಹೇಳಿದ ಹಾಗೆ ಈಚೆಗೆ ಅನೇಕರು ಕಾರ್ಮಿಕರ ವಿಷಯದಲ್ಲಿ ಹೆಚ್ಚಿನ ಸಹಾನುಭೂತಿ ತೋರಿಸುತ್ತಿದ್ದಾರೆ. ಅನೇಕ ರೀತಿಯ ಕೆಲಸಗಳನ್ನು ಮಾಡುತ್ತಿದ್ದಾರೆ. ಪಾಶ್ಚಿಮಾತ್ಯ ದೇಶಗಳಲ್ಲೂ ಕೂಡ ಅನೇಕ ಕೆಲಸಗಳು ನಡೆಯುತ್ತಿವೆ. ನಮ್ಮ ದೇಶದ ಮಾತನ್ನು ಹೇಳುವುದಾದರೆ ಇಲ್ಲಿ ಮೂವತ್ತು ನಲವತ್ತು ವರ್ಷಗಳಿಂದಲೂ ಖಾಸಗೀ ಜನರಿಗೇ ಅನುಕೂಲ ಮಾಡಬೇಕೆಂದಿತ್ತು. ಖಾಸಗೀ ಜನರೇ ಸಂಘಗಳಲ್ಲಿ ಸೇರಬಹುದು. ಬೇಗ ಕಾರ್ಮಿಕರು ತಮ್ಮ ನಾಯಕರನ್ನು ತಾವೇ ತಯಾರು ಮಾಡಬೇಕೆಂದು ಅದಕ್ಕಾಗಿ ಅಷ್ಟು ವರ್ಷಗಳಿಂದ ಶ್ರಮಿಸಿದರೂ ಕೂಡ ಕೆಲಸಗಾರರೇ ಅವರ ನಾಯಕರಾಗಿ ಕೆಲಸ ಮಾಡುವ ಪರಿಸ್ಥಿತಿ ಇನ್ನೂ ಬಂದಿಲ್ಲದೇ ಇರುವುದು ವಿಶಾದಕರವಾದ ಸಂಗತಿ. ಅಂತೂ ಕಾರ್ಮಿಕರು ತಿಳಿವಳಿಕಸ್ಥರಾಗುತ್ತಿದ್ದಾರೆ. ಕಾರ್ಮಿಕರಿಗೆ ಸಂಬಂಧಪಟ್ಟ ಕಾನೂನುಗಳು ದಿನೇದಿನೇ ಹೆಚ್ಚುತ್ತಿವೆ. ಕಾರ್ಮಿಕರು ಸಂತುಷ್ಟರಾಗುತ್ತಿದ್ದಾರೆ. ಅವರ ಕೆಲಸಗಳನ್ನು ಅವರೇ ಮಾಡಿಕೊಳ್ಳುವ ಕಾಲ ಬಂದಿದೆ. ಸರಿಯಾದ ನಾಯಕರನ್ನು ಚುನಾಯಿಸಿಕೊಂಡು ಮುಂದೆ ಬರುತ್ತಿದ್ದಾರೆ. ಸರ್ಕಾರಿ ಸದಸ್ಯರು ಬೇಡವೇ ಬೇಡ ಎನ್ನುವ ಕಾಲವೂ ಬರುತ್ತಿದೆ. ಈ ವಿಷಯವನ್ನು ಬೇರೆ ಚರ್ಚೆ ಮಾಡೋಣ. ಮುಖ್ಯವಾಗಿ ಈಗ ಸರ್ಕಾರಿ ಸದಸ್ಯರಾಗಲೀ ಖಾಸಗೀ ಸದಸ್ಯರಾಗಲೀ ಇಬ್ಬರದೂ ಒಂದೇ ಉದ್ದೇಶವಾಗಿದೆ. ದೇಶದಲ್ಲಿ ಕೈಗಾರಿಕೆಗಳು ಅಭಿವೃದ್ಧಿಯಾಗಬೇಕು. ಕೆಲಸಗಾರರು ಸುಖವಾಗಿ ಜೀವನವನ್ನು ನಡೆಸಿಕೊಂಡು ಬರಬೇಕು, ಇದು ನಮ್ಮೆಲ್ಲರ ಅಭಿಪ್ರಾಯವಾಗಿದೆ. ಇದಕ್ಕೆ ಯಾವ ರೀತಿ ಕಾರ್ಯಕ್ರಮ ಕೈಗೊಳ್ಳಬೇಕೆಂಬುದನ್ನು ಬೇರೆ ಯೋಚನೆ ಮಾಡಬಹುದು. ಈಗ ನಿಯಮದಲ್ಲಿರುವುದನ್ನು ಕಾನೂನು ಮಾಡಿ ಸ್ಪಷ್ಟಪಡಿಸಬೇಕೆಂಬುದು ಈ ಮಸೂದೆಯ ಉದ್ದೇಶ. ಈ ಸಂದರ್ಭದಲ್ಲಿ ಎಷ್ಟೋ ವಾದ ವಿವಾದಗಳು ನಡೆದಿವೆ; ಅವುಗಳ ವಿಮರ್ಶೆಗೆ ನಾನು ಹೋಗುವುದಿಲ್ಲ. ಒಟ್ಟಿನಲ್ಲಿ ನಾನು ಇಷ್ಟು ಹೇಳುತ್ತೇನೆ: ಕಾರ್ಮಿಕರು ಮತ್ತು ಬಂಡವಾಳಗಾರರು ಪರಸ್ಪರ ಸಹಕಾರ ಭಾವದಿಂದ ನಡೆಯುವುದಕ್ಕೆ ಎಲ್ಲರೂ ಶ್ರಮಿಸಬೇಕು. ಇದರಲ್ಲಿ ಈಗಿರತಕ್ಕ ಯಾವ ಅಧಿಕಾರವನ್ನೂ ತೆಗೆದುಹಾಕಿಲ್ಲ. ಇರುವುದನ್ನೇ ಕಾನೂನು ಮಾಡಬೇಕೆಂದು ಕೇಳುತ್ತಿದ್ದೇವೆ. ಆದುದರಿಂದ ಎಲ್ಲರೂ ಇದಕ್ಕೆ ಅಂಗೀಕಾರ ಕೊಡಬೇಕೆಂದು ಪ್ರಾರ್ಥಿಸುತ್ತೇನೆ.

**೪) ದಿನಾಂಕ ಅಕ್ಟೋಬರ್ ೨೬, ೧೯೪೮ರಂದು ಪ್ರಜಾಪ್ರತಿನಿಧಿ ಸಭೆಯ ಉಪಾಧ್ಯಕ್ಷಸ್ಥಾನದಿಂದ ಮಾಡಿದ ಉಪಸಂಹಾರ ಭಾಷಣ:**

ಪ್ರಜಾಪ್ರತಿನಿಧಿ ಸಭೆಯ ಮಾನ್ಯ ಸದಸ್ಯರೇ,

ಪ್ರಜಾಪ್ರತಿನಿಧಿ ಸಭೆಯ ಈ ಅಧಿವೇಶನವನ್ನು ಮುಕ್ತಾಯಗೊಳಿಸಲು ನಾನು ಹರ್ಷಿಸುತ್ತಿದ್ದೇನೆ. ಅಧಿವೇಶನವು ಸ್ವಲ್ಪಮಟ್ಟಿಗೆ ದೀರ್ಘಕಾಲವೇ ಆದರೂ ನಾವೆಲ್ಲರೂ ಶ್ರಮಿಸಿದ್ದೇವೆ. ಈ ಅಧಿವೇಶನವು ನಡೆದಿರುವುದು ಈ ತಿಂಗಳ ೯ನೆಯ ತಾರೀಖಿನಿಂದ ೨೬ನೆ ತಾರೀಖಿನವರೆಗೆ, ಹದಿನೆಂಟು ದಿನಗಳ ಕಾಲ. ಇಷ್ಟು ಕಾಲ ಮತ್ತಾವ ಅಧಿವೇಶನಕ್ಕೂ ಹಿಡಿದಿರಲಿಲ್ಲವೆಂದು ಹೇಳಿದರೂ ಹೇಳಬಹುದು. ಈ ಅವಧಿಯಲ್ಲಿ ಹದಿನೆಂಟು ದಿನಗಳು ಸಭೆ ನಡೆದು ನಾವೆಲ್ಲರೂ ಚರ್ಚಿಸಿ ಕೆಲವು ಚೆನ್ನಾಗಿಯೂ ನಡೆದಿದೆ.

ಈ ಅಧಿವೇಶನದಲ್ಲಿ ಸುಮಾರು ಮೂವತ್ತು ಮಸೂದೆ ಕಾನೂನುಗಳು ಸಭೆಯ ಅನುಮತಿ ಪಡೆದಿವೆ. ನಲವತ್ತಕ್ಕಿಂತಲೂ ಹೆಚ್ಚು ಸಂಖ್ಯೆಯಲ್ಲಿ ಚರ್ಚೆ ನಡೆದಿದೆ. ಸುಮಾರು ಆರು ಅಧಿಸೂಚನೆಗಳು ಸೂಚಿತವಾಗಿ, ಅವುಗಳ ಮೇಲೆ ಸದಸ್ಯರು ಪ್ರಶ್ನೆಗಳನ್ನು ಎತ್ತಿದ್ದಾರೆ. ಸಭೆಯಲ್ಲಿ ಅರವತ್ತು ಪ್ರಶ್ನೆಗಳಿಗೆ ಉತ್ತರ ಹೇಳಲಾಗಿದೆ. ಸರ್ಕಾರದವರು ಮಂಡಿಸಿದ ಕಾರ್ಮಿಕ ರೀತಿಯನ್ನೂ ಮತ್ತು ಆಹಾರ ರೀತಿಯನ್ನೂ ಕುರಿತಾದ ಚರ್ಚೆಗಾಗಿ ಒಂದು ಪ್ರತ್ಯೇಕ ದಿನವೇ ಗೊತ್ತಾಗಿ ವಿಶದವಾಗಿ ಚರ್ಚೆ ನಡೆದಿದೆ. ಒಟ್ಟಿನಲ್ಲಿ ಸರ್ಕಾರದ ಕಾರ್ಯನೀತಿಗಳಿಗೆ ಸಭೆಯ ಅನುಮೋದನೆ ದೊರಕಿದೆ. ಅದಕ್ಕಾಗಿ ನಾನು ಸಂತೋಷಿಸುತ್ತೇನೆ.

ಅನೇಕ ಸಲಹೆಗಳು ಸೂಚಿತವಾಗಿವೆ. ಅವನ್ನು ಸರ್ಕಾರದವರು ತೀವ್ರಾಲೋಚನೆ ಮಾಡುವರೆಂದು ತಮಗೆ ಭರವಸೆ ಕೊಡುತ್ತೇನೆ.

ಸಭಾ ಕಾರ್ಯಗಳು ಗಾಂಭೀರ್ಯದಿಂದ ನಡೆದಿದ್ದು ಸದಸ್ಯರು ವಿಚಾರ ಪೂರ್ಣವಾಗಿ ಚರ್ಚೆನಡೆಸಿದ್ದಾರೆ; ಕೂಡಿದ ಮಟ್ಟಿಗೂ ಶ್ರೇಷ್ಠ ಅಧಿವೇಶನದ ಕಾರ್ಯಕಲಾಪಗಳು ನಡೆದಿದೆ. ತಮ್ಮ ಸ್ಥಾನಕ್ಕೆ ತಾವೆಲ್ಲರೂ ಘನತೆ ಗೌರವಗಳಿಂದ ವರ್ತಿಸಿದ್ದೀರಿ. ಅಧ್ಯಕ್ಷತೆ ವಹಿಸಿದ ನಾನು ಅದಕ್ಕಾಗಿ ತಮ್ಮ ವಿಷಯದಲ್ಲಿ ಕೃತಜ್ಞತೆ ಸಲ್ಲಿಸಬಯಸುತ್ತೇನೆ. ಮೈಸೂರು ಸಂಸ್ಥಾನವು ದೇಶದ ಸಂಸ್ಥಾನಗಳಲ್ಲಿ ವೈಶಿಷ್ಟ್ಯವನ್ನು ಪಡೆದಿದೆ. ಕೆಲವೇ ರಾಜ್ಯಗಳು "ಪಾರ್ಲಿಮೆಂಟರಿ" ಸಂಪ್ರದಾಯವನ್ನು ಬೆಳಿಸಿಕೊಂಡಿರುವುದೂ ಅವುಗಳ ಪೈಕಿ ಮೈಸೂರು ಒಂದಾಗಿದೆ. ಉತ್ತಮವಾದ ಪಾರ್ಲಿಮೆಂಟರಿ ನಿಯಮಗಳಿಗೆ ಭಂಗವುಂಟಾಗದಂತೆ ಶ್ರೇಷ್ಟ ರೀತಿಯಿಂದ ವರ್ತಿಸಿರುವುದಕ್ಕಾಗಿ ತಮ್ಮೆಲ್ಲರನ್ನೂ ಮತ್ತೊಮ್ಮೆ ಅಭಿನಂದಿಸಲಿಚ್ಚಿಸುತ್ತೇನೆ.

ಪ್ರಜಾಹಿತ ಸಾಧನೆಗಾಗಿ ದೀರ್ಘಕಾಲ ಈ ಅಧಿವೇಶನವನ್ನು ನಡೆಯಿಸಿ, ತಾವೆಲ್ಲರೂ ಶ್ರಮಿಸಿದ್ದೀರಿ. ಈಗ ತಾವು ತಮ್ಮ ಸ್ಥಳಗಳಿಗೆ ಹಿಂತಿರುಗಿದನಂತರ ವಿಶ್ರಾಂತಿ ಹೊಂದುವುದಕ್ಕೆ ಅವಕಾಶವಿರುವಂತೆ ತೋರುವುದಿಲ್ಲ. ಏಕೆಂದರೆ ಇನ್ನೂ ಹೆಚ್ಚು ಮಹತ್ವವಾದ ಮತ್ತು ಈಗ ನಡೆಯಿಸಿರುವ ಅಧಿವೇಶನಗಳಷ್ಟೇ ಜವಾಬ್ದಾರಿಯುಳ್ಳ ಕೆಲಸವು ನಿಮಗೆ ಕಾದಿದೆ. ಅದು ಸರ್ಕಾರದ ನೀತಿಗಳು ಬೇಗನೆ ಆಚರಣೆಗೆ ಬಂದು, ಪ್ರಜೆಗಳಲ್ಲಿ ಪ್ರತಿಯೊಬ್ಬರಿಗೂ ಸಲ್ಲಬೇಕಾದಷ್ಟು ಭಾಗದ ಆಹಾರವೂ ಬಟ್ಟೆಯೂ ಅವರಿಗೆ ತಪ್ಪದೆ ದೊರೆಯುವಂತೆ ನೋಡಿಕೊಳ್ಳುವ ಕೆಲಸ. ಆಹಾರ ಧಾನ್ಯಗಳ ಶೇಖರಣೆ ಕೆಲಸವೂ ಅವುಗಳ ಹಂಚಿಕೆ ಕೆಲಸವೂ ಸಮರ್ಪಕವಾಗಿ ನಡೆಯುವಂತೆಯೂ, ಯಾರೊಬ್ಬರಿಗೂ ಅನ್ಯಾಯವಾಗಲಿ ಅಥವಾ ಕಷ್ಟವಾಗಲಿ ಆಗದಂತೆಯೂ ಮಾಡಬೇಕೆಂಬುದು ನಮ್ಮ ಆಶಯ. ಅದಕ್ಕೆ ಸ್ವಲ್ಪವೂ ಬಾಧಕವುಂಟಾಗದಂತೆ ಜಾಗರೂಕತೆಯಿಂದ ಪರಿಶೀಲಿಸಿ ನೋಡಿಕೊಳ್ಳುವ ವಿಶೇಷ ವಿಧಥ ಕರ್ತವ್ಯವೂ ತಮ್ಮಲ್ಲಿ ಪ್ರತಿಯೊಬ್ಬರಿಂದಲೂ ನೆರವೇರಬೇಕಾಗಿದೆ. ಇದಕ್ಕಾಗಿ ಬಹಳ ಶ್ರಮ ವಹಿಸಿ ಕೆಲಸ ಮಾಡಬೇಕೆಂಬುದು ಸ್ಪಷ್ಟವಾಗಿಯೇ ಇದೆ. ಶ್ರಮ ಸಾಧ್ಯವಾದ ಆ ಕೆಲಸವು ತಮ್ಮ ಮುಂದಿದೆ. ಪ್ರಜೆಗಳ ಸುಖ ಸಂತೋಷಗಳನ್ನು ಸಾಧಿಸುವ ತಮ್ಮ ಸಮಸ್ತ ಪ್ರಯತ್ನಗಳೂ ಯಶಸ್ವಿಯಾಗಿ ನೆರವೇರಲೆಂದು ನಾನು ಹಾರೈಸುತ್ತೇನೆ.

ತಮ್ಮಿಂದ ದೊರೆತ ಸಹಾಯ ಸಹಕಾರಗಳಿಗಾಗಿ ಮತ್ತೊಮ್ಮೆ ತಮ್ಮೆಲ್ಲರನ್ನೂ ವಂದಿಸುತ್ತೇನೆ. ತಾವೆಲ್ಲರೂ ಸುಖವಾಗಿ ಪ್ರಯಾಣ ಬೆಳೆಯಿಸಿ ತಮ್ಮ ತಮ್ಮ ಸ್ಥಳಗಳಿಗೆ ಹಿಂತಿರುಗುವಂತೆ ಭಗವಂತನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

**೫) ದಿನಾಂಕ ೧೭.೩.೧೯೫೦ರಂದು ಸನ್ಮಾನ್ಯ ಮೈಸೂರು ಮಹಾರಾಜರು ಪ್ರಜಾಪ್ರತಿನಿಧಿ ಸಭೆಯನ್ನುದ್ದೇಶಿಸಿ ಮಾಡಿದ ಭಾಷಣದ ಮೇಲಿನ ಚರ್ಚೆಯಲ್ಲಿ ಮಾಡಿದ ಭಾಷಣ (ಇಂಗ್ಲೀಷ್ ಭಾಷಣದ ಕನ್ನಡ ತರ್ಜುಮೆ):**

**ಸರ್,**

ಈಗ ಕೆಲವು ಘಂಟೆಗಳವರೆಗೆ ನಾನು ಅತ್ಯಂತ ನೋವು ಹಾಗೂ ಆಶ್ಚರ್ಯಗಳಿಂದ ಮಾನ್ಯ ಸದಸ್ಯರಲ್ಲಿ ಕೆಲವರು ಸನ್ಮಾನ್ಯ ಶ್ರೀ ಮಹಾರಾಜರು ಮಾಡಿದ ಭಾಷಣದ ಮೇಲೆ ಮಾಡಿದ ಟೀಕೆಗಳನ್ನು ಹಾಗೂ ಅವರು ತರಲುದ್ದೇಶಿಸುತ್ತಿರುವ ತಿದ್ದುಪಡಿಗಳನ್ನೂ ಕೇಳಿದ್ದೇನೆ. ಸನ್ಮಾನ್ಯ ಶ್ರೀ ಮಹಾರಾಜರ ಭಾಷಣವು ಮಾನ್ಯ ಸದಸ್ಯರಿಗೆ ಸರ್ಕಾರವು ಸದ್ಯಕ್ಕೆ ಯೋಚಿಸಿರುವ ದಿನನಿತ್ಯದ ಜನಕಲ್ಯಾಣ ಯೋಜನೆಗಳನ್ನು, ಹಾಗೂ ಆ ಕುರಿತಾದ ತಮ್ಮ ಟೀಕೆ-ಟಿಪ್ಪಣಿಗಳನ್ನು ಮಾಡಲು ಅವಕಾಶವನ್ನೂ ನೀಡುವುದಾಗಿದೆ. ಈ ವಿಷಯದಲ್ಲಿ ಕುಂದು ಕೊರತೆಗಳನ್ನು ಎತ್ತಿ ತೋರಿಸುವ ಅಥವಾ ನಮ್ಮಿಂದ ನಿರ್ಲಕ್ಷಿಸಲ್ಪಟ್ಟ ಹೊಸತಾದ ಯೋಜನೆಗಳನ್ನು ನೀಡುವ ಪ್ರಯತ್ನಕ್ಕೆ ಸ್ವಾಗತವಿದೆ. ಆದರೆ ವಿಧಾನ ಮಂಡಲದಲ್ಲಿ ದೀರ್ಘ ಅನುಭವವುಳ್ಳ ಮಾನ್ಯ ಸದಸ್ಯರು ಬಜೆಟ್ ಚರ್ಚೆಯ ರೀತಿಯಲ್ಲಿ ಭಾಷಣವನ್ನು ಮಾಡಿ ಸರ್ಕಾರವನ್ನು ಟೀಕಿಸುವ ಯತ್ನ ಸರಿಯೆಂದು ನನಗನಿಸುತ್ತಿಲ್ಲ. ಸನ್ಮಾನ್ಯ ಅಧ್ಯಕ್ಷರು ಸದಸ್ಯರ ಕಟುವಾದ ಟೀಕೆಗಳಿಗೆ ಇದು ಪ್ರಸಕ್ತ ಸಮಯವಲ್ಲವೆಂದು ತಿಳಿಹೇಳಿದರೂ ಕೂಡ ಮಾನ್ಯ ಸದಸ್ಯರು ಅದನ್ನೇ ಮುಂದುವರಿಸಿದ ಬಗ್ಗೆ ನನಗೆ ಖೇದವಿದೆ. ಮುಂದಿನ ದಿನಗಳಲ್ಲಿ ರಾಜಪ್ರಮುಖರ ಭಾಷಣಕ್ಕೆ ಸಂಬಂಧಿಸಿದಂತೆ ನಾವು ಉತ್ತಮ ರೂಢಿಗಳನ್ನು ಜಾರಿಗೊಳಿಸುತ್ತೇವೆಂದು ನಾನು ಆಶಿಸುತ್ತೇನೆ. ಮಾನ್ಯ ಸದಸ್ಯರು ಸರ್ಕಾರವು ಅನುಸರಿಸುತ್ತಿರುವ ವ್ಯವಹಾರ ಧೋರಣೆಗಳನ್ನು ವಿಮರ್ಶಿಸುವರೆಂದೂ ಸರ್ಕಾರವು ಆಡಳಿತದಲ್ಲಿ ಅನುಸರಿಸಬೇಕಾದ ರೀತಿ ನೀತಿಗಳನ್ನು ವಿಶ್ಲೇಷಿಸುವರೆಂದೂ ಆಶಿಸುತ್ತಾ ನನ್ನ ಸಾಮಾನ್ಯ ಅವಲೋಕನವನ್ನು ಇಲ್ಲಿಗೆ ನಿಲ್ಲಿಸುತ್ತೇನೆ.

ನನ್ನ ಅಧೀನದಲ್ಲಿರುವ ವಿಭಾಗಗಳ ಕುರಿತಾಗಿ ಮಾಡಿದ ಟೀಕೆಗಳ ಬಗ್ಗೆ ನನಗೆ ಹೇಳುವುದಿದೆ. ಮಾನ್ಯ ಸದಸ್ಯರಾದ ಅಬ್ದುಲ್ ರಹಮಾನ್ ಅವರು ಗ್ರಾಮಾಂತರ ಪ್ರದೇಶಗಳಲ್ಲಿ ಬಹುಸಂಖ್ಯಾತ ಜನರಿಗೆ ಆಹಾರ ಮತ್ತು ಜೀವನಾವಶ್ಯಕ ವಸ್ತುಗಳ ಉತ್ಪಾದನೆಗೆಂದು ವಿದ್ಯುತ್ ಸರಬರಾಜು ಮಾಡುವ ಯಾವ ಯೋಜನೆಯನ್ನೂ ಸರ್ಕಾರವೂ ಪ್ರಸ್ತಾಪಿಸಿಲ್ಲವೆಂದು ಹೇಳಿದ್ದಾರೆ. ಸರ್, ಸನ್ಮಾನ್ಯ ರಾಜ ಪ್ರಮುಖರ ಭಾಷಣವು ಈ ವಿಷಯವನ್ನು ಪ್ರಸ್ತಾಪಿಸುತ್ತದೆ. ಗೌರವಾನ್ವಿತ ಸದಸ್ಯರಾದ ಜನಾಬ್ ಮಹಮದ್ ಇಮಾಂ ಅವರೂ ಕೂಡ ಅಭಿವೃದ್ಧಿಪರ ಯೋಜನೆಗಳು ಮತ್ತು ನಕ್ಷೆಗಳನ್ನು ಸರ್ಕಾರವು ಸದನಕ್ಕೆ ನೀಡಿಲ್ಲವೆಂದು ಹೇಳಿದ್ದಾರೆ. ಆದರೆ ಈಗ ನಿಮ್ಮ ಕೈಯಲ್ಲಿರುವ ರಾಜಪ್ರಮುಖರ ಭಾಷಣದ ನಡವಳಿಯ ೧೬ನೇ ಪುಟದಲ್ಲಿ ಹೇಳಿದಂತೆ.

ಮದ್ರಾಸ್ ಸರ್ಕಾರದೊಂದಿದೆ ಮೇಕೆದಾಟು ಯೋಜನೆಗೆ ಸಂಬಂಧಿಸಿದಂತೆ ಮಾತುಕತೆಗಳು ಪೂರ್ಣವಾಗಿವೆ. ಹೊನ್ನೆಮರಡು ಯೋಜನೆಯು ಸರ್ವೆಯ ಅಂತಿಮ ಹಂತದಲ್ಲಿದೆ. ಉತ್ಪಾದನೆಯಾದ ವಿದ್ಯುತ್ತನ್ನು ಅತಿಶೀಘ್ರ ಬಳಕೆ ಮಾಡುವಲ್ಲಿ ಎಚ್ಚರವಹಿಸಲಾಗುತ್ತಿದೆ. ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚುಹೆಚ್ಚು ವಿದ್ಯುತ್ ಪೂರೈಕೆಯು ಕೃಷಿ ಹಾಗೂ ಗೃಹಕೈಗಾರಿಕೆಗಳಲ್ಲಿ ಬಹಳ ಸಹಾಯಕವಾದುದರಿಂದ ನನ್ನ ಸರ್ಕಾರವು ಕೇವಲ ತಾಲೂಕು ಕೇಂದ್ರಗಳಿಗಷ್ಟೇ ಅಲ್ಲದೆ ಎಷ್ಟು ಸಾಧ್ಯವೋ ಅಷ್ಟು ಹಳ್ಳಿಗಳಿಗೂ ಸಹ ವಿದ್ಯುತ್ ಪೂರೈಕೆಯ ಯೋಜನೆಗಳನ್ನು ಅನುಸರಿಸುತ್ತಿವೆ.

ಇದೂ ಅಲ್ಲದೆ, ಸನ್ಮಾನ್ಯ ಸದಸ್ಯರಿಗೆ ಕಾಲಕಾಲಕ್ಕೆ ನೀಡುತ್ತಿರುವ ಆಯವ್ಯಯಗಳ ವಿವರಗಳಿಂದ ಮತ್ತು ಆಡಳಿತ ವರದಿಗಳಿಂದ ರಾಜ್ಯದ ತುಂಬೆಲ್ಲ ವಿದ್ಯುದೀಕರಣವು ಭರದಿಂದ ಕೈಗೆತ್ತಿಕೊಳ್ಳಲ್ಪಟ್ಟಿದೆಯೆಂದು ತಿಳಿಯುವುದಲ್ಲವೇ? ನಾವು ಆಡಳಿತಕ್ಕೆ ಬಂದಾಗ ೨೯ ತಾಲೂಕು ಕೇಂದ್ರಗಳಿಗೆ ವಿದ್ಯುದೀಕರಣವಾಗಬೇಕಿತ್ತು ಹಾಗೂ ರಾಜ್ಯದ ಎಲ್ಲ ತಾಲೂಕುಗಳು ಹಾಗೂ ಪ್ರಮುಖ ಪಟ್ಟಣಗಳಿಗೂ ಐದು ವರ್ಷಗಳ ಅವಧಿಯಲ್ಲಿ ವಿದ್ಯುತ್ ಪೂರೈಸಬೇಕೆಂದು ನಾವು ಯೋಜಿಸಿದೆವು. ಹೀಗೆ ಹೇಳಿದ ಕೂಡಲೆ ನಾವು ಕೆಲಸ ಪ್ರಾರಂಭಿಸಿದ್ದು ಗೌರವಾನ್ವಿತ ಸದಸ್ಯರಿಗೆ ನೆನಪಿನಲ್ಲಿರಬಹುದು. ಈಗ ಇದಾಗಿ ಸುಮಾರು ಎರಡು ವರುಷಗಳ ಸಮಯ ಸಂದಿದೆ. ಉಳಿದ ೨೯ ತಾಲೂಕುಗಳಲ್ಲಿ ೧೩ ತಾಲೂಕು ಕೇಂದ್ರಗಳು ಈ ಅವಧಿಯಲ್ಲಿ ನಮ್ಮಿಂದ ವಿದ್ಯುತ್ ಪಡೆದಿವೆ. ಒಟ್ಟಾರೆ ೨೬೦ ಹಳ್ಳಿಗಳು, ಸುಮಾರು ಒಂದು ಕೋಟಿ ರೂಪಾಯಿ ವೆಚ್ಚದಲ್ಲಿ ವಿದ್ಯುದೀಕರಿಸಲ್ಪಟ್ಟು ನಮಗೆ ಇಂದು ೩೦ ಲಕ್ಷರೂಪಾಯಿಗಳ ಗ್ರೋಸ್ ಉತ್ಪನ್ನವಿದ್ದು ೨೦ ಲಕ್ಷ ರೂಪಾಯಿಗಳ ನಿವ್ವಳ ಲಾಭ ಅಥವಾ ಪ್ರತಿಶತ ೨೦ರ ಲಾಭವಾಗುತ್ತಿದೆ. ನಾವು ಈ ವರ್ಷದಲ್ಲಿ ರಾಜ್ಯದ ಉಳಿದ ಭಾಗಗಳಿಗೆ ಇದನ್ನು ವಿಸ್ತರಿಸಲು ಉದ್ದೇಶಿಸಿದ್ದು ಇದಕ್ಕಾಗಿ ೩೦೦ ಲಕ್ಷ ರೂಪಾಯಿಗಳನ್ನು ಪ್ರತ್ಯೇಕವಾಗಿ ತೆಗೆದಿರಿಸಲಾಗಿದೆ. ಇದಕ್ಕಿಂತ ಹೆಚ್ಚೇನು ಮಾಡಲು ಸಾಧ್ಯ? ಐದು ವರ್ಷಗಳ ಅವಧಿಯಲ್ಲಿ ಪೂರ್ಣ ರಾಜ್ಯಕ್ಕೆ ವಿದ್ಯುಚ್ಛಕ್ತಿಯನ್ನು ಕೊಡಲು ನಾವು ಉದ್ದೇಶಿಸಿದ್ದು ಈಗಾಗಲೇ ಅರ್ಧ ಮಾರ್ಗ ಕ್ರಮಿಸಿದ್ದೇವೆ. ಇದು ಒಂದು ಸಮಾಧಾನಕರ ವಿಷಯವೆಂದು ಪರಿಗಣಿಸಲ್ಪಡಬೇಕು.

**೬) ದಿನಾಂಕ ೨೫.೩.೧೯೫೪ರಂದು ಅಧಿವೇಶನದ ಕೊನೆಯಲ್ಲಿ ನ್ಯಾಯಾಂಗ ಹಾಗೂ ಕಾರ್ಮಿಕ ಸಚಿವರಾಗಿ ಮಾಡಿದ ಭಾಷಣ:**

**ಅಧ್ಯಕ್ಷರೇ,** ನನ್ನ ವ್ಯಾಪ್ತಿಯಲ್ಲಿರತಕ್ಕ ಇಲಾಖೆಗಳ ವಿಷಯದಲ್ಲಿ ಹೆಚ್ಚಿನ ಚರ್ಚೆಗಳೇನೂ ಆಗಿಲ್ಲ. ಅದಕ್ಕಾಗಿ ನಾನು ಸದಸ್ಯರನ್ನು ವಂದಿಸುತ್ತೇನೆ.

ಒಬ್ಬಿಬ್ಬರು ಬಿಟ್ಟು ಮಿಕ್ಕವರು ಅಭಿನಂದನೆಗಳನ್ನು ಸೂಚಿಸಿಯೂ ಮಾತನಾಡಿದ್ದಾರೆ. ಅವರಿಗೆ ಇನ್ನೂ ಹೆಚ್ಚಿನ ವಂದನೆಗಳು. ಇನ್ನು ಕೆಲವರು ಸೂಚನೆಗಳನ್ನು ಕೊಟ್ಟಿದ್ದಾರೆ. ಅವುಗಳಲ್ಲಿ ಕೆಲವು ಬಹಳ ಸೂಕ್ತವಾದ ಸೂಚನೆಗಳೇ. ಅವುಗಳನ್ನು ನಾವು ಕೈಲಾದ ಮಟ್ಟಿಗೂ ಅವಲಂಬಿಸುತ್ತೇವೆ. ಶ್ರೀಮಾನ್ ಆಚಾರ್ಯರವರು ಮನೆ ಕೈಗಾರಿಕೆಗಳನ್ನೂ ಗ್ರಾಮ ಕೈಗಾರಿಕೆಗಳನ್ನು ಹೇಗೆ ಪ್ರೋತ್ಸಾಹಿಸಬೇಕೆಂದು ಹೇಳಿದ್ದಾರೆ. ಅವರ ಸಲಹೆ ಸರಿಯಾಗಿದೆ. ಸರ್ಕಾರದವರು ಅದೇ ರೀತಿ ಮಾಡುವುದಕ್ಕೆ ಪ್ರಯತ್ನಪಡುತ್ತಾರೆ. ಕೆಲವು ಸದಸ್ಯರು Heating current ವಿಷಯದಲ್ಲಿ

ಹೆಚ್ಚಿಗೆ ತೆರಿಗೆ ಹಾಕಬಾರದು, ಈಗಿರತಕ್ಕ ಆರು ಕಾಸಿನ ದವರೇ ಇರಬೇಕೆಂದು ಹೇಳಿದರು. ಮತ್ತೊಬ್ಬರು ಇದನ್ನು ಒಂದಾಣೆ ಮಾಡಬಹುದೆಂದು ವಾದಿಸಿದರು. ನಾವು ಎರಡಕ್ಕೂ ಮಧ್ಯಸ್ಥರಾಗಿ ಒಂಬತ್ತು ಕಾಸುಗಳನ್ನು ಮಾತ್ರ ಹಾಕಿದ್ದೇವೆ. ಆ ಇಬ್ಬರು ಸದಸ್ಯರುಗಳು ಮಾತನಾಡಿದ್ದರಲ್ಲೇ ಒಬ್ಬರಿಗೊಬ್ಬರು ಉತ್ತರ ಕೊಟ್ಟಿದ್ದಾರೆ. ಆದ್ದರಿಂದ ನಾವು ಅನುಸರಿಸಿರುವ ನೀತಿಯೇ ಸರಿಯೆಂದು ಭಾವಿಸುತ್ತೇನೆ. Heating circuit ಸಾಮಾನ್ಯವಾಗಿ ಉಪಯೋಗಿ-ಸತಕ್ಕವರು ಪಟ್ಟಣವಾಸದವರು. ಅದೂ ಸ್ವಲ್ಪ ಅನುಕೂಲಸ್ಥರೇ. ಹೆಚ್ಚಾಗಿ ಸೌದೆ ಉಪಯೋಗಿಸದೆ ಕರೆಂಟ್ ಉಪಯೋಗಿಸಲೆಂದು ಈ ಸೌಲಭ್ಯವನ್ನು ಸರ್ಕಾರದವರು ಒದಗಿಸಿದ್ದಾರೆ. ಸಾಮನ್ಯವಾಗಿ heating circuit ಹಾಕಿಸಿ, ಸ್ಟೌವ್ ಮುಂತಾದವುಗಳನ್ನು ತೆಗೆದುಕೊಳ್ಳುವಂಥವರು ಅನುಕೂಲಸ್ಥರೇ ಆಗಿರಬೇಕು. ಅಂಥವರು ೯ ಕಾಸು ಕೊಡುವುದೇನೂ ಹೆಚ್ಚಲ್ಲವೆಂದು ಹೇಳಬಹುದು. ಅಂಥ ಶಕ್ತಿಯುತರಾಗಿರುವವರಿಂದ ಸರ್ಕಾರದವರು ಸ್ವಲ್ಪ ಹೆಚ್ಚಿಗೆ ಫಾಯಿದೆ ಹೊಂದುವುದು ತಪ್ಪಲ್ಲ. ಆದ್ದರಿಂದ ೯ ಕಾಸುಗಳನ್ನು ಹಾಕಿರುವುದು ಸರಿಯೆಂದು ನಮ್ಮ ಅಭಿಪ್ರಾಯ. ಆದರೆ, ಅದೇ ವ್ಯವಸಾಯದ ಪಂಪುಗಳ ವಿಷಯ ನೋಡುವದಾದರೆ ವ್ಯವಸಾಯವೇ ನಮ್ಮ ದೇಶದ ಪ್ರಗತಿಗೆ ಮೂಲ ಕಾರಣವೆಂದು ಮನಗಂಡು, ವ್ಯವಸಾಯಗಾರರಿಗೆ ಅನುಕೂಲ ಮಾಡಿಕೊಡಬೇಕೆಂದು ಹೇಳಿ, ವ್ಯವಸಾಯದ ಪಂಪುಗಳಿಗೆ ಕೇವಲ ೬ ಕಾಸಿನ ತೆರಿಗೆ ಹಾಕಿದ್ದೇವೆ. ಇದರಲ್ಲೂ ವ್ಯಾಪಾರದ ಬೆಳೆಗಳನ್ನು ಬೆಳೆದರೆ ಅವರಿಗೆ ಒಂದಾಣೆ ಗೊತ್ತು ಮಾಡಿದ್ದೇವೆ.

ಅದಕ್ಕಾಗಿ ಕಮರ್ಷಿಯಲ್ ಕ್ರಾಪ್ ಎಂದರೆ ಏನೆಂಬುದನ್ನು ವಿವರಿಸಿದ್ದೇವೆ. ಆಲೂಗಡ್ಡೆ, ಬಾಳೆಹಣ್ಣು ಮುಂತಾದ ಬೆಳೆಗಳೆಲ್ಲಾ ಕಮರ್ಷಿಯಲ್ ಕ್ರಾಪ್ ಎಂದು ಹೇಳಿದ್ದೇವೆ. ಕೆಲವರು ಇವುಗಳು ಆಹಾರದ ಬೆಳೆಗಳೆಂದೇ ಭಾವಿಸಬೇಕೆಂದು ಹೇಳಿಕೊಂಡಿದ್ದರ ಮೇಲೆ ಅದಕ್ಕೂ ಒಪ್ಪಿಕೊಂಡು ಈಚೆಗೆ ಕಮರ್ಷಿಯಲ್ ಕ್ರಾಪ್ ಎಂದರೆ ಹೊಗೆಸಪ್ಪು, ಉಪ್ಪುನೇರಳೆ ಈರೀತಿಯಾದ ಕೆಲವನ್ನು ಮಾತ್ರ ನಿಗದಿಮಾಡಿ, ಇವುಗಳ ಮೇಲೆ ಮಾತ್ರ ಒಂದಾಣೆ ತೆಗೆದುಕೊಳ್ಳುತ್ತೇವೆ. ಇದನ್ನು ಹೇಗೆ ಕಂಡುಹಿಡಿಯುತ್ತೀರಿ ಎಂದು ಮಾನ್ಯ ಸದಸ್ಯರು ಕೇಳಿದರು. ಎಲ್ಲಾ ಕಡೆಯೂ ಆಗಾಗ ತನಿಖೆ ಮಾಡಿ ವರದಿಮಾಡುವುದಕ್ಕೆಂದು ಇನಿಸ್ಪೆಕ್ಟರುಗಳಿರುತ್ತಾರೆ. ಊರಿನ ಪಟೇಲ್ ಶಾನುಭೋಗರಿಂದ ಪಹಣಿ ವರದಿ ಬಂದಿರುತ್ತದೆ. ಅಲ್ಲದೆ ಇನ್ನೊಂದು ರಿಯಾಯತಿಯನ್ನು ಕೂಡ ಆಹಾರ ಬೆಳೆಗಳಿಗೆ ತೋರಿಸಿದ್ದೇವೆ. ಯಾರಾದರೂ ಪಂಪು ಹಾಕಿರುವವರು ತಮ್ಮ ಜಮೀನಿನಲ್ಲಿ ಅರ್ಧ ಭಾಗಕ್ಕೆ ಮೇಲ್ಪಟ್ಟ ಪ್ರದೇಶದಲ್ಲಿ ಆಹಾರ ಪದಾರ್ಥಗಳನ್ನು ಬೆಳೆದಿದ್ದು ಮಿಕ್ಕ ಭಾಗದಲ್ಲಿ ಕಮರ್ಷಿಯಲ್ ಕ್ರಾಪ್ ಬೆಳೆದಿದ್ದರೂ ಎಲ್ಲ ಭಾಗವನ್ನೂ ಒಟ್ಟಿಗೆ ಆಹಾರ ಬೆಳೆಯೆಂದೇ ಪರಿಗಣಿಸಿ ಅರ್ಧಾಣೆಯಂತೆ ಚಾರ್ಜ್ ಮಾಡುತ್ತೇವೆ. ಅರ್ಧಕ್ಕೆ ಕಡಿಮೆ ಭಾಗದಲ್ಲಿ ಆಹಾರದ ಬೆಳೆಗಳಿದ್ದರೆ ಪೂರ್ತಾ ಪ್ರದೇಶವನ್ನು ಕಮರ್ಷಿಯಲ್ ಕ್ರಾಪ್ ಎಂದು ಭಾವಿಸಿ ಒಂದಾಣೆಯಂತೆ ವಸೂಲು ಮಾಡುತ್ತೇವೆ. ಇದು ಸಮಂಜಸವಾಗಿ ಕಾಣುತ್ತದೆ. ಏಕೆಂದರೆ, ಕಮರ್ಷಿಯಲ್ ಕ್ರಾಪ್ ಹಾಕುವವರು ಸಾಮಾನ್ಯವಾಗಿ ಹೆಚ್ಚಿಗೆ ಜಮೀನಿದ್ದು ಅನುಕೂಲಸ್ಥರಾಗಿರುವವರೇ ಆಗಿರುತ್ತಾರೆ. ಅಂಥವರಿಂದ ಒಂದಾಣೆ ವಸೂಲು ಮಾಡುವುದು ನ್ಯಾಯ ಮತ್ತು ಧರ್ಮ. ಹಾಗೆ ಮಾಡುವುದರಿಂದ ಬಾಧಕವಿಲ್ಲ.

ನೀರಾವರಿ ಸೌಕರ್ಯದ ವಿಚಾರವನ್ನು ಒಂದು ಸಲ ಆಗಲೇ ಹೇಳಿದ್ದೇವೆ. ೨೦ ಯೋಜನೆಗಳನ್ನು ತಯಾರಿಸಿದ್ದೇವೆ. ಹೊಸದಾಗಿ ೨೦ ರಿಂದ ೪೦ ಹಾರ್ಸ್ ಪವರ್ ವರೆಗಿನ ಪಂಪುಗಳನ್ನು ಕೊಟ್ಟು ಪಿಕ್ ಅಪ್‌ಗಳನ್ನು ಒದಗಿಸುತ್ತೇವೆ. ನಿಲಸೋಗೆ ಬಳಿ ನೀರಾವರಿ ಸೌಕರ್ಯವಿರುವ ಜಾಗದಲ್ಲಿ ಜನರಿಗೆ ಅನುಕೂಲಪಡಿಸಿ ಸುಮಾರು ಒಂದೊಂದು ಜಾಗದಲ್ಲಿ ೪೦೦-೫೦೦ ಎಕರೆಗಳಷ್ಟು ಜಮೀನು ತರಿ, ಬಾಗಯ್ತು ವ್ಯವಸಾಯಕ್ಕೆ ಬರುವಂತೆ ಮಾಡಿ ಅನುಕೂಲಪಡಿಸಿದ್ದೇವೆ. ಹರಿಹರದ ಬಳಿ ೪೦೦ ಎಕರೆ ಆಗಲೇ ಸಾಗಾಗುವದಕ್ಕೆ ಶುರು ಆಗಿದೆ. ಒಂದು ಸಾವಿರ ಎಕರೆಯವರೆಗೂ ಪಿಕ್ ಅಪ್ ಗಳಿಂದ ಸಾಗು ಮಾಡಲು ಅನುಕೂಲಪಡಿಸಿದೆ. ಹೀಗೆ ವಿದ್ಯುಚ್ಛಕ್ತಿಯ ಅನುಕೂಲವನ್ನು ನೀರಾವರಿಗೆ ಒದಗಿಸಿ ಹೆಚ್ಚುಹೆಚ್ಚಾಗಿ ತರಿ ಹಾಗೂ ಬಾಗಾಯ್ತ ಬೆಳೆ ತೆಗೆಯಲು ಜನರಿಗೆ ಅನುಕೂಲ ಮಾಡುತ್ತಿದ್ದೇವೆ. ಸರ್ಕಾರದವರು ಎಷ್ಟೇ ಮಾಡಿದರೂ ಇನ್ನೂ ಹೆಚ್ಚಾಗಿ ಮಾಡಬೇಕೆಂಬ ಅಪೇಕ್ಷೆ ಪಡುವುದು ಲೋಕದಲ್ಲಿ ಸಹಜವೇ ಆಗಿದೆ.

**೭) ದಿನಾಂಕ ೩೦.೮.೧೯೫೦ರಂದು ವಿಧಾನಸಭೆಯಲ್ಲಿ ಸಚಿವರಾಗಿ ಪ್ರಶ್ನೆಗಳಿಗೆ ಉತ್ತರ ನೀಡುತ್ತ ಮಾಡಿದ ಭಾಷಣ:**

**ಮಾನ್ಯ ಅಧ್ಯಕ್ಷರೆ,** ನಾನು ೫ ನಿಮಿಷಗಳಲ್ಲಿ ಒಂದೆರಡು ಮಾತುಗಳನ್ನು ಹೇಳಿ ಮುಗಿಸಿಬಿಡುತ್ತೇನೆ.

ವಿದ್ಯುಚ್ಛಕ್ತಿಯ ವಿಷಯವಾಗಿ ಜನಾಬ್ ಮಹಮದ್ ಇಮಾಮ್‌ರವರು ಒಂದು ಆಕ್ಷೇಪಣೆಯನ್ನೆತ್ತಿದ್ದರು. ಆಹಾರದ ಸ್ವಯಂ ಪರಿಪೂರ್ಣತೆಯನ್ನು ಸಾಧಿಸುವುದಕ್ಕೆ ಸಂಬಂಧ ಪಟ್ಟಂತೆ ವಿದ್ಯುಚ್ಛಕ್ತಿ ಇಲಾಖೆಯುವರು ಹೆಚ್ಚಾಗಿ ಕೆಲಸ ಮಾಡಲಿಲ್ಲವೆಂದು ಅವರ ತಿದ್ದುಪಡಿಯಲ್ಲಿಯೂ ತಿಳಿಸಿದ್ದಾರೆ. ನಾನು ಅವರು ಸೂಚಿಸಿದ ವಿದ್ಯುಚ್ಛಕ್ತಿ ವಿಚಾರವನ್ನು ಸ್ವಲ್ಪ ಮಟ್ಟಿಗೆ ಪ್ರಸ್ತಾಪ ಮಾಡುತ್ತೇನೆ.

ವಾಸ್ತವಿಕ ಅಂಶಗಳ ಮೇಲೆ ವ್ಯತ್ಯಾಸ ತಲೆದೂರಿದರೆ ಅದು ರಿಕಾರ್ಡುಗಳಿಂದ ಇತ್ಯರ್ಥವಾಗಬೇಕೇ ಹೊರತು ವಾಗ್ವಾದಗಳಿಂದ ಆಗುವುದಿಲ್ಲ. ಆದ್ದರಿಂದ ರಿಕಾರ್ಡಗಳನ್ನು ನೋಡಿ ತಾವು ಜವಾಬ್ ಕೊಟ್ಟರೆ ಒಳ್ಳೆಯದು. ಹಿಂದಿನ ಮಂತ್ರಿಗಳ ಕಾಲದಲ್ಲಿ ಒಂದಾಣೆ ದರವಿದ್ದುದನ್ನು ಈಚೆಗೆ ನಾವು ಆಹಾರ ಪದಾರ್ಥಗಳ ಬೆಳವಣಿಗೆಯನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ಆರು ಕಾಸಿಗೆ ಇಳಿಸಿದೆವು.

ಎರಡನೆಯದಾಗಿ ಹಿಂದೆ ವ್ಯವಸಾಯದ ಪಂಪುಗಳನ್ನು ಹಾಕಿ ಕೊಡಬೇಕಾದರೆ 'ಲೈನ್ ಮಿನಿಮಮ್' ಎಂದು ಹೇಳಿ ಶೇಕಡ ೫ ರಷ್ಟು ಹಣವನ್ನು ಕಟ್ಟಿಸಿಕೊಳ್ಳುತ್ತಿದ್ದರು. ಈಗ ಅದನ್ನು ಕೇಳುತ್ತಿಲ್ಲ. ಅಲ್ಲದೆ ಪಂಪುಗಳನ್ನು ಕೊಂಡುಕೊಳ್ಳುವುದರಲ್ಲೂ ಕೂಡ ೨೦೦೦ ರೂಪಾಯಿನ ಪಂಪನ್ನು ಹಾಕಿಸಿಕೊಳ್ಳಬೇಕಾದರೆ ಮೊದಲು ೨೦೦೦ ರೂಪಾಯಿ ಕೊಡಬೇಕಾಗಿತ್ತು. ಅಂತಹದ್ದನ್ನು ತಪ್ಪಿಸಿ ಈಗ ಕೇವಲ ನೂರು ರೂಪಾಯಿಗಳನ್ನು ಕೊಟ್ಟರೆ ಸಾಕು. ಪಂಪು ಹಾಕಿಸಿಕೊಡುತ್ತೇವೆ. ಯಾರು ಬೇಕಾದರೂ ಪಂಪು ಹಾಕಿಕೊಡಿ ಎಂದು ಕೇಳಿದರೆ ನಾವೇ ಹಾಕಿಸಿಕೊಟ್ಟು ಅದಕ್ಕೆ ತಗಲುವ ಮೊಬಲಗನ್ನು ಕಂತಿನಲ್ಲಿ ತೆಗೆದುಕೊಳ್ಳುತ್ತೇನೆ. ಇವೆಲ್ಲ ಪ್ರೋತ್ಸಾಹಗಳಲ್ಲವೆ?

ಈಗ ಕೇವಲ ೨-೩ ವರ್ಷಗಳಲ್ಲಿ ಈ ಪ್ರಕಾರ ಮಾಡಿ ೭೦೦ ಪಂಪುಗಳನ್ನು ಕೊಟ್ಟಿದ್ದೇವೆ. ಹಿಂದೆ ೪೦-೫೦ ವರ್ಷಗಳಿಂದ ಕೊಟ್ಟಿರುವುದು ಒಟ್ಟೂ ೧೧೮೧ ಎನ್ನುವಾಗ ನಾವು ಆಹಾರ ಪದಾರ್ಥಗಳ ವಿಷಯದಲ್ಲಿ ಪ್ರೋತ್ಸಾಹ ತೋರಿಸಿದ್ದೇವೆಯೆ? ಅಥವಾ ನಿರ್ಲಕ್ಷವಾಗಿದ್ದೇವೆಯೆ? ಜನಾಬ್ ಇಮಾಮ್‌ರವರೇ ಹೇಳಲಿ. ಇದರ ಸಹಾಯದಿಂದ ಹತ್ತು ಸಾವಿರ ಎಕರೆಗಳಷ್ಟು ಕುಷ್ಕಿ ಜಮೀನು ತರಿ ಆಗಲು ಸಹಾಯವಾಗಿದೆ. ಮೂರು ಪಲ್ಲರಾಗಿ ಬೆಳೆಯುತ್ತಿದ್ದ ಕಡೆ ಹತ್ತು ಪಲ್ಲ ಬೆಳೆಯಲು ಅವಕಾಶವಾಗಿದೆ. ಇಷ್ಟೇ ಅಲ್ಲದೆ ಒಬ್ಬಬ್ಬರೇ ಪಂಪುಗಳನ್ನು ಹಾಕಿಸಿಕೊಳ್ಳುವುದು ಕಷ್ಟವೆಂದು ಭಾವಿಸಿದರೆ ಹತ್ತಾರು ಜನರು ಸೇರಿ lift irrigation ಏರ್ಪಾಡು ಮಾಡಿಕೊಳ್ಳುವ ಅನುಕೂಲ ಮಾಡಿಕೊಟ್ಟು ಒಟ್ಟೂ ತಗಲುವ ಖರ್ಚಿನಲ್ಲಿ ದಾಮಾಷಾ ಮೇರೆಗೆ ತೆಗೆದುಕೊಳ್ಳಬೇಕೆಂದು ಹೇಳಿ ನೀಲ ಸೋಗೆ, ಹರಿಹರ ಮುಂತಾದ ಎರಡು ಮೂರು ಕಡೆ ವ್ಯವಸ್ಥೆ ಮಾಡಿಕೊಟ್ಟಿದ್ದೇವೆ. ಒಂದು ಕಡೆ ೪೦೦ ಎಕರೆ ಇನ್ನೊಂದು ಕಡೆ ೨೦೦ ಎಕರೆ ಮಾಡಿದೆ.

ಹೀಗೆಯೇ ಇನ್ನೂ ಅನೇಕ ವಿಷಯಗಳಲ್ಲಿ ಸಹಾಯ ಮಾಡುತ್ತಿದ್ದೇವೆ. ಮುಖ್ಯವಾಗಿ ಎಲ್ಲೆಲ್ಲಿ ವಿದ್ಯುಚ್ಛಕ್ತಿ ಕೊಡಬೇಕೆಂದು ಕೇಳುತ್ತಿದ್ದಾರೋ ಅಲ್ಲಿಗೆಲ್ಲಾ ಒದಗಿಸುವ ಏರ್ಪಾಡು ಮಾಡಿದೆ. ಈ ಮೊದಲೇ ಒಂದು ಪ್ರಶ್ನೆಯ ಸಂಬಂಧದಲ್ಲಿ ಹೇಳಿದಹಾಗೆ ಈ ಸಂಬಂಧದಲ್ಲಿ ೫ ಕೋಟಿ ರೂಪಾಯಿಗಳ ಒಂದು ಯೋಜನೆಯನ್ನಿಟ್ಟುಕೊಂಡಿದ್ದೇವೆ. ದುಡ್ಡಿನ ಅಭಾವದಿಂದ ಅದನ್ನು ಜಾರಿಗೆ ತರುವುದಕ್ಕಾಗಿಲ್ಲ. ನಮ್ಮ ಕೈಗೆ ಎಷ್ಟೇಬೇಗ ಮೊಬಲಗು ಒದಗುತ್ತದೆಯೊ ಅಷ್ಟುಬೇಗನೇ ವಿದ್ಯುಚ್ಛಕ್ತಿಯನ್ನು ಎಲ್ಲರಿಗೂ ಒದಗಿಸಬೇಕೆಂಬುದು ನಮ್ಮ ಅಭಿಪ್ರಾಯ. ಇದಕ್ಕಾಗಿ ಸರ್ವಪ್ರಯತ್ನವನ್ನೂ ಮಾಡುತ್ತಿದ್ದೇವೆ. ಅನೇಕ ತೊಡಕುಗಳಿವೆಯೆಂಬುದನ್ನು ಹೇಳಬೇಕಾಗಿಲ್ಲ.

ಸರ್ಕಾರದವರು ವಿದ್ಯುಚ್ಛಕ್ತಿ ಇಲಾಖೆಯವರಿಂದ ವ್ಯವಸಾಯಾಭಿವೃದ್ಧಿಗೆ ಹೆಚ್ಚಿನ ಸಹಾಯವನ್ನೊದಗಿಸಿ ತನ್ಮೂಲಕ ಹೆಚ್ಚು ಆಹಾರ ಬೆಳೆಯಬೇಕೆಂಬ ಯೋಜನೆಯ ಬಗ್ಗೆ ತಮ್ಮ ಸಹಕಾರ ನೀಡಲು ಸದಾ ಸಿದ್ಧರಾಗಿರುತ್ತಾರೆಂಬ ಭರವಶೆಯನ್ನು ತಮಗೆ ನೀಡಬಲ್ಲೆ.

**೮) ದಿನಾಂಕ ೩೦.೮.೧೯೫೦ ರಂದು ಕಾನೂನು ಮತ್ತು ಕಾರ್ಮಿಕ ಸಚಿವರಾಗಿ ವಿಧಾನಸಭೆಯಲ್ಲಿ ಮತಕ್ಷೇತ್ರಗಳ ಮರುವಿಭಜನೆಯ ಕುರಿತು ಮಾಡಿದ ವಿಶೇಷ ಭಾಷಣ:**

**ಸ್ವಾಮಿ,**

ಈಗಾಗಲೇ ಭಾರತದೇಶದ ರಾಜ್ಯಾಂಗ ಯಾವರೀತಿ ಇರಬೇಕೆಂಬುದನ್ನು ತೀರ್ಮಾನ ಮಾಡಿದ್ದಾರೆ. ಇದೇವರ್ಷ ಜನವರಿ ೨೦ನೆಯ ತಾರೀಖಿನಿಂದ ಭಾರತದೇಶ ಸ್ವತಂತ್ರ ಸಂಸ್ಥಾನವಾಗಿ ಇಂಡಿಯನ್ ರಿಪಬ್ಲಿಕ್ ಆಗಿದೆ. ಇದರ ಆಡಳಿತ ಡೆಮೊಕ್ರಾಟಿಕ್ ರೆಸ್ಪಾನ್ಸಿಬಲ್ ಗೌರ್‍ನಮೆಂಟ್ ಪದ್ಧತಿಯ ಮೇರೆಗೆ ನಡೆಯಬೇಕಾಗಿರುವುದರಿಂದ ಅದಕ್ಕನುಗುಣವಾಗಿ ಶಾಸನ ಸಭೆಗಳನ್ನು ರಚನೆ ಮಾಡಬೇಕೆಂಬುವುದಾಗಿ ರಾಜ್ಯಾಂಗದಲ್ಲಿ ಅಡಕವಾಗಿದೆ. ದೇಶದ ಪ್ರಜೆಗಳಿಂದ ಆಡಳಿತ ನಡೆಯಬೇಕೆಂಬ ತತ್ವದ ಮೇಲೆ ಪ್ರಜೆಗಳಿಂದ ಚುನಾಯಿತರಾದವರೇ ಶಾಸನ ಸಭೆಗಳಲ್ಲಿದ್ದು ಅಂತಹ ಪ್ರಜಾ ಪ್ರತಿನಿದಿಗಳ ನಂಬಿಕೆಯನ್ನು ಪಡೆದಿರುವವರೇ ಆಡಳಿತವನ್ನು ನಡೆಸಬೇಕೆಂಬ ತತ್ವದ ಮೇಲೆ ರಾಜ್ಯಾಂಗ ರಚನೆಯಾಗಿದೆ. ಇಂತಹ ಶಾಸನ ಸಭೆಗಳು ಯಾವರೀತಿ ಇರಬೇಕೆಂಬ

ವಿಚಾರವೂ ರಾಜ್ಯಾಂಗದಲ್ಲಿ ಅಡಕವಾಗಿದೆ. ನಮಗೆ ಸಂಬಂಧಪಟ್ಟಂತೆ ಹೇಳುವುದಾದರೆ, ಕೇಂದ್ರ ಸರ್ಕಾರದ ಪಾರ್ಲಿಮೆಂಟಿನಲ್ಲಿರುವಂತೆ ಕೌನ್ಸಿಲ್ ಆಫ್ ಸ್ಟೇಟ್ ಮತ್ತು ಹೌಸ್ ಆಫ್ ಪೀಪಲ್ ಎಂದು ಎರಡು ಸಭೆಗಳು ನಮ್ಮ ಸಂಸ್ಥಾನದಲ್ಲಿಯೂ ಶಾಸನ ಸಭೆಗಳು ಎರಡು ಇರಬಹುದಾಗಿದೆ. ಪ್ರಕೃತದಲ್ಲಿ ಈ ಶಾಸನ ಸಭೆಗಳ ಚುನಾವಣೆಗೆ ಅಗತ್ಯವಿರುವ ವಿಚಾರವನ್ನು ನಾವು ಪರ್ಯಾಲೋಚನೆ ಮಾಡುವುದು ಅತಿ ಜರೂರಾಗಿದೆ.

House of the People ನಲ್ಲಿ ೫೦೦ ಜನ ಸದಸ್ಯರಿರಬೇಕೆಂದು ವಿಧೇಯಕವಾಗಿದೆ. ಒಂದೊಂದು ಸಂಸ್ಥಾನದಿಂದಲೂ ಗೊತ್ತುಮಾಡಲ್ಪಟ್ಟಿರುವ ಸಂಖ್ಯಾ ಪ್ರತಿನಿಧಿಗಳು ಚುನಾಯಿತರಾಗಿ ಬರತಕ್ಕದ್ದೆಂದು ವಿಧಾಯಕವಾಗಿದೆ. ಈ ಸಂಖ್ಯೆಯನ್ನು ಗೊತ್ತುಮಾಡಿ ಒಂದು ಪಟ್ಟಿಯನ್ನು ತಯಾರಿಸುವ ಅಧಿಕಾರವನ್ನು ಪ್ರೆಸಿಡೆಂಟ್‌ರಿಗೆ ಕೊಟ್ಟಿದೆ. ಅದಕ್ಕನುಸಾರವಾಗಿ ಅವರು ಒಂದು ಆಜ್ಞೆ ಮಾಡಿದ್ದಾರೆ. ಅದರ ಪ್ರಕಾರ ನಮ್ಮ ಸಂಸ್ಥಾನದಲ್ಲಿ ೧೧ಜನ ಪ್ರತಿನಿಧಿಗಳನ್ನು ಅಲ್ಲಿಗೆ ಚುನಾಯಿಸಿ ಕಳುಹಿಸಬಹುದೆಂದು ಮಾಡಿದ್ದಾರೆ. ಲೆಕ್ಕದ ಪ್ರಕಾರ ೫ ರಿಂದ ೭ ೧/೨ ಲಕ್ಷ ಪ್ರಜೆಗಳಿಗೆ ಒಬ್ಬರು ಪ್ರತಿನಿಧಿಯಂತಾಗುತ್ತದೆ. ಇದಕ್ಕೆ ನಮ್ಮ ಮೈಸೂರು ಸಂಸ್ಥಾನದಲ್ಲಿ ಚುನಾವಣಾ ಕ್ಷೇತ್ರ ವಿಭಜನೆಯನ್ನು ಯಾವ ರೀತಿ ಮಾಡಬೇಕೆಂಬುದನ್ನು ಈಗ ಆಲೋಚನೆ ಮಾಡಬೇಕಾಗಿದೆ. ಹೀಗೆಯೇ ನಮ್ಮ ಸಂಸ್ಥಾನದ ಲೆಜಿಸ್ಲೇಟಿವ್ ಅಸೆಂಬ್ಲಿ ಸಭೆಗೂ ೯೯ ಜನ ಸದಸ್ಯರಿರಬಹುದೆಂದು ತೀರ್ಮಾನ ಮಾಡಿದ್ದಾರೆ. ಈ ೯೯ ಜನರನ್ನು ಚುನಾಯಿಸುವುದಕ್ಕೂ ಯಾವ ರೀತಿ ಕ್ಷೇತ್ರ ವಿಭಜನೆಯಾಗಬೇಕೆಂಬುದನ್ನು ನಾವು ಯೋಚಿಸಬೇಕಾಗಿದೆ. ನಮ್ಮ ದೇಶದ ಪ್ರಜೆಗಳೆಲ್ಲ ಸೇರಿ ಈ ಪ್ರತಿನಿಧಿಗಳನ್ನು ಚುನಾಯಿಸಬೇಕಾಗಿದೆ. ಇಂತಿಂಥ ಕ್ಷೇತ್ರದಿಂದ ಇಂತಿಷ್ಟು ಜನರನ್ನು ಆರಿಸಿಬೇಕೆಂಬುದನ್ನು, ಕ್ಷೇತ್ರಗಳು ಹೀಗೇ ಹೀಗೇ ಇರಬೇಕೆಂಬುದನ್ನು ತೀರ್ಮಾನಿಸಬೇಗಾಗಿದೆ. ಇದರಲ್ಲಿ single-member constituency multi-member constituency ಎಂಬ ಪ್ರಶ್ನೆ ಬೇರೆ ಇದೆ. ಅದನ್ನು ಆಮೇಲೆ ಹೇಳುತ್ತೇನೆ.

ಎರಡು ಶಾಸನ ಸಭೆಗಳಲ್ಲಿಯೂ ಷೆಡ್ಯೂಲ್ಡ್ ಕೋಮಿನವರಿಗೆ ಕೆಲವು ಸ್ಥಾನಗಳನ್ನು ಮೀಸಲಾಗಿಡಬೇಕೆಂದು ವಿಧಾಯಕ ಮಾಡಿದ್ದಾರೆ. ಇದಕ್ಕೆ ಕಾರಣವೇನೆಂದರೆ ಸಾಮಾನ್ಯ ಚುನಾವಣೆಗಳಲ್ಲಿ ಹಿಂದುಳಿದ ಕೋಮಿನವರಿಗೆ ಚುನಾಯಿತರಾಗಿ ಬರಲು ಅವಕಾಶವಿಲ್ಲದೇ ಇರಬಹುದೆಂದು, ಇನ್ನು ಹತ್ತು ವರ್ಷಗಳವರೆಗಾದರೂ ಈ ರೀತಿ ಮೀಸಲಾಗಿಟ್ಟು ಅವರ ಅಭಿಪ್ರಾಯಗಳನ್ನೂ ಪ್ರತಿಪಾದಿಸತಕ್ಕವರು ಶಾಸನ ಸಭೆಯಲ್ಲಿರಬೇಕೆಂದು ಉದ್ದೇಶದಿಂದ ಮಾಡಿದ್ದಾರೆ. ಇದಕ್ಕೆ ಸಂಬಂಧ ಪಟ್ಟ ನಿಯಮದ ಪ್ರಕಾರ ಸಂಸ್ಥಾನದ ಒಟ್ಟೂ ಪ್ರಜಾಸಂಖ್ಯೆಗೆ ಷೆಡ್ಯೂಲ್ಡ್ ಪಂಗಡದವರ ಪ್ರಜಾಸಂಖ್ಯೆ ಯಾವ ಪ್ರಮಾಣದಲ್ಲಿರುತ್ತದೆಯೋ ಅದಕ್ಕನುಗುಣವಾಗಿ ಅದೇ ಪ್ರಮಾಣದಲ್ಲಿ ೯೯ ಜನ ಸದಸ್ಯರಿರುವ ಸಭೆಯಲ್ಲಿ ಷೆಡ್ಯೂಲ್ಡ್ ಪಂಗಡದವರಿಗೆ ಸ್ಥಾನಗಳನ್ನು ಮೀಸಲಾಗಿಡಬೇಕು. ನಮ್ಮ ಸಂಸ್ಥಾನದ ಪ್ರಜಾಸಂಖ್ಯೆ ೮೦.೬ ಲಕ್ಷವೆಂದು ಪ್ರೆಸಿಡೆಂಟ್‌ರವರು ತೀರ್ಮಾನ ಮಾಡಿ ಆಜ್ಞೆ ಹೊರಡಿಸಿದ್ದಾರೆ. ಇದು ೧೯೪೧ನೆಯ ಇಸವಿಯ ಸೆನ್ಸಸ್ ಆಧಾರದ

ಮೇಲೆ ಲೆಕ್ಕ ಹಾಕಲ್ಪಟ್ಟಿದೆ. ಆಗ ಸಂಸ್ಥಾನದ ಒಟ್ಟೂ ಪ್ರಜಾಸಂಖ್ಯೆಯಲ್ಲಿ ಷೆಡ್ಯೂಲ್ಡ್ ಪಂಗಡಗಳ ಪ್ರಜಾಸಂಖ್ಯೆ ಶೇಕಡ ೯೦.೧ ರಷ್ಟಿತ್ತು. ಎಂದರೆ ಅವರ ಪ್ರಜಾಸಂಖ್ಯೆ ೧೫.೬ ಅಥವಾ ೧೫.೭ ಲಕ್ಷವಾಗುತ್ತದೆ. ಅದೇ ದಾಮಾಷಾವಿಟ್ಟುಕೊಂಡು ಅವರಿಗಾಗಿ ೧೯ ಸ್ಥಾನಗಳನ್ನು ಈ ಸಭೆಯಲ್ಲಿಯೂ ಎರಡು ಸ್ಥಾನಗಳನ್ನು ಹೌಸ್ ಆಫ್ ದಿ ಪೀಪಲ್‌ನಲ್ಲಿಯೂ ಮೀಸಲಾಗಿಡಬೇಕಾಗುತ್ತದೆ. ಎಂದರೆ, ಸಭೆಯಲ್ಲಿರಬೇಕಾದ ೯೯ ಜನ ಸದಸ್ಯರಲ್ಲಿ ೮೦ ಜನರಲ್ ಸ್ಥಾನಗಳೂ ೧೯ ಷೆಡ್ಯೂಲ್ಡ್ ಪಂಗಡದವರ ಸ್ಥಾನಗಳೂ ಇರುತ್ತದೆ.

ಇನ್ನು ಯಾರ ಓಟು ಕೊಡುವುದು ಎಂಬ ವಿಷಯವೂ ಸಹ ರಾಜ್ಯಾಂಗದಲ್ಲೇ ಅಡಕವಾಗಿದೆ. ಅದರಂತೆ ವಯಸ್ಕರ ಮತದಾನ ಪದ್ಧತಿ ಇರಬೇಕೆಂದು ಗೊತ್ತಾಗಿದೆ. ವಯಸ್ಕರೆಂದರೆ ೨೧ ವರ್ಷ ವಯಸ್ಸು ಮೀರಿರುವ ಇಂಡಿಯಾ ದೇಶದ ಪ್ರಜೆಗಳೆಲ್ಲರೂ ಓಟುದಾರರಾಗುತ್ತಾರೆ. ಎಲ್ಲರೂ ಓಟು ಮಾಡಬಹುದು ಎಂಬುದಾಗಿ ತೀರ್ಮಾನ ಮಾಡಿದ್ದಾರೆ. ಇದು ಒಂದು ದೊಡ್ಡ ಪ್ರಯೋಗ. ಲಿಮಿಟೆಡ್ ಫ್ರಾಂಚಾಯಿಸ್‌ನಲ್ಲೇ ಎಷ್ಟೋ ಅನಕ್ಷರಸ್ಥ ಓಟರುಗಳಿದ್ದರು. ಆಗಲೇ ಕಷ್ಟವಾಗಿತ್ತು. ಆದರಲ್ಲಿ ನಮ್ಮ ದೇಶದ ಜನಗಳಲ್ಲಿ ಶೇಕಡಾ ೧೦ ಭಾಗ ಓಟುದಾರರಾಗಬಹುದು. ಬಾಕಿ ದೇಶಗಳಲ್ಲಿ ಶೇಕಡ ಹದಿನೈದು ಭಾಗ ಆಗಬಹುದೆಂದು ಇತ್ತು. ಈಗ ನಮ್ಮ ದೇಶದ ಜನಸಂಖ್ಯೆ ೮೦.೬ ಲಕ್ಷ ಅದರ ಪೈಕಿ ಸುಮಾರು ೩೮ಲಕ್ಷ ಓಟರುಗಳಿದ್ದಾರೆ. ಅವರೆಲ್ಲರೂ ಯಾವ ರೀತಿ ಓಟು ಮಾಡಬೇಕು, ಯಾವ ಯಾವ ಕ್ಷೇತ್ರಗಳನ್ನು ವಿಭಜನೆ ಮಾಡಬೇಕು ಎಂಬುದನ್ನು ತೀರ್ಮಾನಮಾಡುವುದಲ್ಲಿ ಬಹಳ ಪ್ರಾಮುಖ್ಯತೆ ಇದೆ. ಏಕೆಂದರೆ ಈಗಿನ ಸರ್ಕಾರದ ಪದ್ಧತಿ ಪ್ರಜಾಪ್ರಭುತ್ವ ಪದ್ಧತಿಯೆಂದು ತೀರ್ಮಾನ ಮಾಡಿದ್ದೇವೆ. ಇದು ಸುಸೂತ್ರವಾಗಿ, ಸುಲಲಿತವಾಗಿ ಕೆಲಸಮಾಡಬೇಕಾದರೆ ಇದಕ್ಕನುಗುಣವಾಗಿರತಕ್ಕ ಪದ್ಧತಿಯನ್ನು ಅನುಸರಿಸಿದರೆ ಆಗುತ್ತದೆಯೇ ವಿನಾ ತಿಳುವಳಿಕೆಗೆ ಬಾರದೇ ಇರತಕ್ಕ ಅಥವಾ ಕಷ್ಟಕರವಾದ ಒಂದು ಯೋಜನೆಯನ್ನು ನಾವು ತೀರ್ಮಾನ ಮಾಡಿದರೆ ಅದು ಕಾರ್ಯಗತವಾಗುವುದಿಲ್ಲ.

ಅನೇಕ ತರಹ ಪದ್ದತಿಗಳಿವೆ. ಮೊದಲನೆಯದಾಗಿ ನಾವು ಈ ಅಸೆಂಬ್ಲಿಯ ೯೯ ಜನಗಳಿಗೆ ಓಟು ಮಾಡಬಹುದು. ಅದನ್ನು ಯಾವ ರೀತಿ ಮಾಡೋಣವೆಂದರೆ, ಸಿಂಗಲ್ ಮೆಂಬರ್ ಕಾನ್ಸಿಟ್ಯೂಯೆನ್ಸಿ ಎಂದು ಮಾಡಬಹುದು. ಹಾಗಾದರೆ ಪ್ರತಿಯೊಂದು ಕ್ಷೇತ್ರವನ್ನೂ ಅಲಾಯಿದ್ದ ಮಾಡಿ ಆಯಾಯ ಕ್ಷೇತ್ರದಿಂದ ಒಬ್ಬಬ್ಬ ಪ್ರತಿನಿಧಿ ಬರಬಹುದು. ಆ ಕ್ಷೇತ್ರದಿಂದ ನಾಲ್ಕಾರು ಜನ ಸ್ಪರ್ಧಿಸಬಹುದು. ಯಾರಿಗೆ ಹೆಚ್ಚು ಓಟು ಬರುತ್ತದೆಯೋ ಅವರನ್ನು ಚುನಾಯಿಸಬಹುದು. ಹೀಗೆ ೯೯ ಕ್ಷೇತ್ರ ಮಾಡಬಹುದು. ಅದರಲ್ಲಿ ೧೯ ಕ್ಷೇತ್ರ ರಿಸರ್ವ್ ಮಾಡಬೇಕಾಗುತ್ತದೆ. ಆದಕಾರಣ ೬೧ ಸಿಂಗಲ್ ಮೆಂಬರ ಕಾನ್ಸಿಟ್ಯುಯನ್ಸಿ, ೧೯ ಡಬ್ಬಲ್ ಮೆಂಬರ್ ಕಾನ್ಸಿಟ್ಯುಯೆನ್ಸಿ ಎಂದರೆ ೧೯ X ೨ = ೩೮, ೬೧ + ೩೮ = ೯೯ ಆದ ಹಾಗಾಯಿತು. ಆ ರೀತಿ ಮಾಡಬಹುದು. ಅಥವಾ ಜನರಲ್ ಕ್ಯಾಸ್ಟ್‌ಗೆ ೫-೬ ಕಾನ್ಸಿಟ್ಯುಯೆನ್ಸಿ ಒಟ್ಟಿಗೆ ಸೇರಿಸಿಬಿಟ್ಟು ಷೆಡ್ಯೂಲ್ ಕಾಸ್ಟಿಗೆ

೧೯ ಕಾನ್ಸ್ಟಿಟ್ಯೂಯೆನ್ಸಿ ಮಾಡಬಹುದು. ಆ ಹತ್ತೊಂಬತ್ತರಿಂದಲೂ ಷೆಡ್ಯೂಲ್ ಕ್ಯಾಸ್ಟ್‌ನವರು ಬರಬಹುದು. ಮತ್ತೆ ಬಾಕಿ ೮೦ ಜನರು ರೆಪ್ರೆಸೆಂಟೇಟಿವ್ಸ್ ಆಗಿ ಬರಬಹುದು. ಈ ರೀತಿ ಮಾಡಬಹುದು. ಇದರಲ್ಲಿ ಯಾವುದೇ ಸೂಕ್ತ ಎಂಬುದನ್ನು ನಾನು ಆಲೋಚನೆ ಮಾಡಬೇಕು. ಸರ್ವೇಸಾಧಾರಣವಾಗಿ ಇತ್ತೀಚಿಗೆ ನೋಡಿದ್ದರಲ್ಲಿ ಎಲ್ಲ ಕಡೆಯೂ ಸಿಂಗಲ್ ಮೆಂಬರ್ ಕಾನ್ಸ್ಟಿಟ್ಯೂಯೆನ್ಸಿನೇ ಹೆಚ್ಚಾಗಿ ಅಪೇಕ್ಷಿಸುತ್ತಾರೆ. ಮತ್ತು ಕಾರ್ಯಾಚರಣೆಗೆ ತರುತ್ತಾ ಇದ್ದಾರೆ. ಉದಾಹರಣೆಗೆ ಅಮೇರಿಕಾ ಮತ್ತು ಇಂಗ್ಲೆಂಡಿನಲ್ಲಿ ಇದೇ ಪದ್ಧತಿ ಜಾರಿಯಲ್ಲಿದೆ.

ನಾನು ಮೊದಲೇ ತಿಳಿಸಿದ್ದೇನೆ. ಇಲ್ಲಿ ನಾವೀಗ general principles ಮೇಲೆ ತಮ್ಮೆಲ್ಲರ ಅಭಿಪ್ರಾಯಗಳನ್ನು ತಿಳಿಯಬೇಕಾಗಿದೆ. ಈ ಬಗ್ಗೆ ತಾವು ಕೊಡತಕ್ಕ ಸಲಹೆಗಳನ್ನೆಲ್ಲಾ ನಾವು ಕ್ರೋಢೀಕರಿಸಿ ಒಂದು ವರದಿಯನ್ನು ಚುನಾವಣೆ ಕಮೀಷನರಿಗೆ ಕಳುಹಿಸಿಕೊಡುತ್ತೇವೆ. ಅವರು ಈ ನಮ್ಮೆಲ್ಲರ ಅಭಿಪ್ರಾಯಗಳನ್ನೂ ಪ್ರಕಟಮಾಡುತ್ತಾರೆ. ಈ ಬಗ್ಗೆ ಸಾರ್ವಜನಿಕರ ಅಭಿಪ್ರಾಯ ಯಾವರೀತಿಯಿರುತ್ತದೆಂಬುದನ್ನು ಕೇಂದ್ರದ ಪಾರ್ಲಿಮೆಂಟಿನವರು ನೇಮಕ ಮಾಡಿರುವ ಅಡ್ವೈಜರಿ ಬೋರ್ಡಿನವರು, ಅಂದರೆ ನಮ್ಮ ಸಂಸ್ಥಾನಕ್ಕೆ ನೇಮಕ ಮಾಡಿರತಕ್ಕ ಸಮಿತಿಯವರು ಶೇಖರಿಸಿ ಅವರೂ ಕೂಡ ಆ ಪಾರ್ಲಿಮೆಂಟು ಅಧ್ಯಕ್ಷರಿಗೆ ಒಂದು ವರದಿಯನ್ನು ಕಳಿಸಿಕೊಡುತ್ತಾರೆ. ಆಗ ಆ ಚುನಾವಣಾ ಕಮಿಷನರರು ಈ ಎರಡನ್ನೂ ಕ್ರೋಢೀಕರಿಸಿ ಪ್ರೆಸಿಡೆಂಟ್ ಅವರಿಗೆ ಒಂದು ಅಖೈರು ವರದಿಯನ್ನು ಒಪ್ಪಿಸುತ್ತಾರೆ. ನಂತರ ಅವರು ಈ ಬಗ್ಗೆ ಒಂದು ಮಸೂದೆಯನ್ನು ಪಾರ್ಲಿಮೆಂಟಿನ ಮುಂದೆ ಮಂಡಿಸಿ ಅದನ್ನು ಅಖೈರಾಗಿ ತೀರ್ಮಾನ ಮಾಡುತ್ತಾರೆ. ಹೀಗೆ ಅಖೈರು ತೀರ್ಮಾನ ಪಾರ್ಲಿಮೆಂಟಿಗೆ ಸೇರಿರತಕ್ಕದಾಗಿದೆ.

## ಭಾಗ-3

**ವಿಧಾನ ಪರಿಷತ್ತಿನ ಸಭಾಪತಿಗಳಾಗಿ ಮಾಡಿದ ಕೆಲವು ಆಯ್ದ ಭಾಷಣ ಹಾಗೂ ನೀಡಿದ ರೂಲಿಂಗ್‌ಗಳು.**

**೧) ವಿಧಾನ ಪರಿಷತ್ತಿನ ಸಭಾಪತಿಗಳಾಗಿ ಪರಿಷತ್ತಿನಲ್ಲಿ ಮಾಡಿದ ಮೊದಲಭಾಷಣ ದಿನಾಂಕ : ೧೭.೬.೧೯೫೨.**

ಮಾನ್ಯ ಮಂತ್ರಿಗಳೆ ಹಾಗೂ ಮಾನ್ಯ ಸದಸ್ಯರುಗಳೆ,

ಈ ಸಭೆಯ ಕಾರ್ಯ-ಕಲಾಪಗಳೆಲ್ಲವನ್ನೂ ತಾವುಗಳ ಈಗ ಸೂಚಿಸಿರುವಂತೆ ನನ್ನ ಕೈಲಾದಮಟ್ಟಿಗೂ ಕನ್ನಡದಲ್ಲೇ ನಡೆಸುವಂತೆ ಮಾಡಬೇಕೆಂಬುದೇ ನನ್ನ ಅಭಿಲಾಷೆ. ಆದರೆ ಕೆಲವು ವೇಳೆ ಅನಿವಾರ್ಯವಾಗಿ, ಎಂದರೆ ಮುಖ್ಯವಾಗಿ ರೂಲಿಂಗ್‌ಗಳನ್ನು ಅಥವಾ ತೀರ್ಮಾನಗಳನ್ನು ಕೊಡತಕ್ಕ ಕಾಲದಲ್ಲಿ ಆ ಬಗ್ಗೆ ಉಪಯೋಗಿಸತಕ್ಕ ಪ್ರತಿಯೊಂದು ಪದವನ್ನೂ ತೂಕಮಾಡಿ ಪ್ರಯೋಗಿಸಲು ಅದು ಕನ್ನಡದಲ್ಲಿ ಪ್ರವೀಣರಾದವರಿಗೆ ಮಾತ್ರ ಸಾಧ್ಯವೇ ವಿನಾ ನನ್ನಂತಹ ಪಾಮರನಿಗೆ ಹಾಗೆ ಮಾತನಾಡಲು ತುಂಬಾ ತೊಂದರೆಯುಂಟಾಗಬಹುದು. ಆದುದರಿಂದ ತಾವುಗಳೆಲ್ಲರೂ ದಯವಿಟ್ಟು ಭಾಷಣಮಾಡುವಾಗ ಇಂಗ್ಲೀಷಿನಲ್ಲಿ ಯಾವುದಾದರೂ ಪದಗಳನ್ನು ಉಪಯೋಗಿಸಿದಾಗ ತಾವು ಅದನ್ನು ಸಹನೆಯಿಂದ ತಾಳಬೇಕೆಂದು ನಾನು ತಮ್ಮೆಲ್ಲರನ್ನೂ ಪ್ರಾರ್ಥಿಸಿಕೊಳ್ಳುತ್ತೇನೆ.

ನಾನು ಹಿಂದಿನ ಕಾಲದಲ್ಲಿ ಓದನ್ನು ಓದಿದವನು. ನನಗೆ ಇಂಗ್ಲೀಷಿನಲ್ಲಿ ಪರಿಶ್ರಮ ಜಾಸ್ತಿ; ಕನ್ನಡದಲ್ಲಿ ಕಡಿಮೆ. ನಾನು ಹಿಂದೆ ಬಿ.ಎ. ಪರೀಕ್ಷೆಗೆ ಓದುತ್ತಿದ್ದಾಗ ಕನ್ನಡ ನನಗೆ ಅನಾವಶ್ಯಕವಾಗಿತ್ತು. ಇಂಗ್ಲಿಷ್, ಆಪ್ಷನಲ್ ಇತ್ಯಾದಿ ಭಾಗಗಳನ್ನೆಲ್ಲ ನಾನು ಇಂಗ್ಲೀಷಿನಲ್ಲೆ ತೆಗೆದುಕೊಂಡವನಾದುದರಿಂದ ನನಗೆ ಸಾಕಷ್ಟು ಪರಿಶ್ರಮ ಇಂಗ್ಲೀಷಿನಲ್ಲೇ ಉಂಟಾಯಿತು. ಆದರೆ ನಾನೆ ನನ್ನ ವಿಚಾರವಾಗಿ ಅಷ್ಟು ಹೆಚ್ಚಾಗಿ ಮಾತನಾಡಿದರೆ, ಅದು ರುಚಿಕರವಾಗಿರುವುದಿಲ್ಲ. ಆದರೆ ಒಂದೆರಡು ಮಾತುಗಳನ್ನು ಮಾತ್ರ ಹೇಳಬಯಸುತ್ತೇನೆ. ನಾನು ಇಂಟರ್ ಮೀಡಿಯಟ್ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಕನ್ನಡ ಪ್ರಬಂಧ ಸ್ಪರ್ದೆಯಲ್ಲಿ "ಮುಂದೆ ಒಂದಾನೊಂದು ಕಾಲದಲ್ಲಿ ಒಂದು ರಾಜನಿದ್ದನು" ಎಂದು ಬರೆದಿದ್ದೆ. ನಾವು ಅರವರು. ಆದರೆ ಅದನ್ನು "ಹಿಂದೆ ಒಂದಾನೊಂದು ಕಾಲದಲ್ಲಿ ಒಬ್ಬ ರಾಜನಿದ್ದನು" ಎಂದು ಬರೆಯಬೇಕಾಗಿತ್ತು. ಒಂದು ಎಂಬ ಪದವು ಪ್ರಾಣಿಗಳನ್ನು ಸೂಚಿಸುವ ಸಂದರ್ಭದಲ್ಲಿ ಉಪಯೋಗಿಸತಕ್ಕ ಪದವೇ ಹೊರತು ಮನುಷ್ಯರಿಗೆ ಉಪಯೋಗಿಸತಕ್ಕದ್ದಲ್ಲ. ಹೀಗೆ ಒಂದು ಪಂಕ್ತಿಯಲ್ಲೇ ಎರಡು ತಪ್ಪುಗಳನ್ನು ಮಾಡಿದರೆ ನೀನು ಹೇಗೆ ಪರೀಕ್ಷೆಯಲ್ಲಿ ಉತ್ತೀರ್ಣನಾಗುತ್ತೀಯೇ? ಎಂದು ಉಪಾಧ್ಯಾಯರು ಶ್ರೀ ಗರಣಿ ಕೃಷ್ಣಾಚಾರ್ಯರು ನನಗೆ ಕೇಳಿದ್ದರು. ನನಗೆ ಕನ್ನಡದಲ್ಲಿ ಅಷ್ಟು ಪ್ರವೀಣತೆಯಿರುವುದಿಲ್ಲ. ಆದುದರಿಂದ ಈಗ ಕನ್ನಡದಲ್ಲಿ ಮಾತನಾಡಲು ನನಗೆ ಕೊಂಚ ಸಂಕೋಚವೂ, ಭಯವೂ ಇದ್ದೇ ಇದೆ.

ಆದರೆ ನಾನು ೧೯೨೬ನೆಯ ಇಸವಿಯಲ್ಲಿ ಅಸೆಂಬ್ಲಿಗೆ ಸೇರಿದ ಕಾಲದಲ್ಲಿ ಇಂಗ್ಲೀಷಿನಲ್ಲಿ Mr. President ಎಂದು ಮಾತನಾಡಲು ಪಕ್ರಮಿಸಿದಾಗ ಸಭಿಕರೆಲ್ಲರೂ 'ಕನ್ನಡ ಕನ್ನಡ' ಎಂದು

ಕೂಗಿದರೂ. ನನಗೆ ಕನ್ನಡ ಬಾರದು. ಆದರೂ ಆ ಸಭೆಯವರ ಅಪೇಕ್ಷೆಯಂತೆ ನಡೆಯಬೇಕೆಂದು ತಪ್ಪೋ ನೆಪ್ಪೋ ಕನ್ನಡದಲ್ಲೇ ಮೊದಲು ಮಾಡಿದೆ. ಈಗ ನಾಲ್ಕರು ಶಬ್ದಗಳನ್ನು ಸೇರಿಸಿಕೊಂಡು ಕನ್ನಡದಲ್ಲಿ ಮಾತನಾಡಬಲ್ಲೆನೆಂದು ತಿಳಿದುಕೊಂಡಿದ್ದೇನೆ. ಅನೇಕ ವೇಳೆ ನನ್ನ ಅಭಿಪ್ರಾಯಗಳೆಲ್ಲೂ ಕೂಡ ಇಂಗ್ಲೀಷಿನಲ್ಲೇ ಸುಲಭವಾಗಿ ಓಡುತ್ತವೆ. ಕನ್ನಡದಲ್ಲಿ ಓಡುವದಿಲ್ಲ. ಕನ್ನಡ ಭಾಷೆಯಲ್ಲಿ ಮಾತನಾಡಬೇಕಾದರೆ ಮೊದಲು ಇಂಗ್ಲೀಷಿನಲ್ಲಿ ಯೋಚನೆ ಮಾಡಿ ಅದನ್ನು ಕನ್ನಡಕ್ಕೆ ತರ್ಜುಮೆ ಮಾಡಿಕೊಂಡು ಮಾತನಾಡಬೇಕಾಗುತ್ತದೆ. ಕಾಲದ ಮಹಿಮೆಯನ್ನು ನಾವು ನೋಡಬೇಕು. ದೇಶದಲ್ಲಿ ಹೊಸದಾದ ವಾತಾವರಣ ಹುಟ್ಟಿದೆ. ಕನ್ನಡಕ್ಕೆ ಹಿಂದೆ ಇದ್ದಂಥ ಪ್ರಾಶಸ್ತ್ಯವನ್ನು ಪುನಃ ಕೊಡಬೇಕಾದ ಅವಶ್ಯಕತೆ ಒದಗಿದೆ. ಕನ್ನಡ ಭಾಷೆಯನ್ನು ಎಷ್ಟು ಮುಂದಕ್ಕೆ ತರುತ್ತೇವೆಯೋ, ಅಷ್ಟೂ ನಮಗೆ ಕೀರ್ತಿ, ಖ್ಯಾತಿ ಉಂಟಾಗುತ್ತದೆ ಎಂಬುದನ್ನು ಚೆನ್ನಾಗಿ ಬಲ್ಲೆ. ಕನ್ನಡದಲ್ಲಿ ಮಾತನಾಡಬೇಕು, ಮತ್ತು ಕನ್ನಡದಲ್ಲಿ ಕಾರ್ಯಕಲಾಪಗಳನ್ನು ನಡೆಸಬೇಕೆಂಬುದೇ ನನ್ನ ಅಭಿಲಾಷೆ. ಆದರೆ ಒಂದೊಂದು ಸಲ ಇಂಗ್ಲಿಷು ಭಾಷೆಯನ್ನು ಅನಿವಾರ್ಯವಾಗಿ ಉಪಯೋಗಿಸಬೇಕಾಗಿ ಬರುತ್ತದೆ.

ಈ ಸಭೆಯಲ್ಲಿ ತಮ್ಮೆಲ್ಲರನ್ನೂ ವಂದಿಸತಕ್ಕ ಬಗ್ಗೆ ಈಗಾಗಲೇ ಒಂದು ಪುಟ್ಟ ಭಾಷಣವನ್ನು ಇಂಗ್ಲೀಷಿನಲ್ಲೇ ಸಿದ್ಧ ಪಡಿಸಿಕೊಂಡು ಬಂದಿದ್ದೇನೆ. ಅದನ್ನು ಈಗ ನಾನು ತಮ್ಮ ಮುಂದೆ ಇಂಗ್ಲೀಷಿನಲ್ಲೇ ಓದುತ್ತೇನೆ. ಅದಕ್ಕಾಗಿ ತಾವೆಲ್ಲರೂ ಕ್ಷಮಿಸಬೇಕು ಮತ್ತು ಅದಕ್ಕೆ ತಾವೆಲ್ಲರೂ ಅಪ್ಪಣೆ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಭಾಷಣವು ಇಂಗ್ಲೀಷಿನಲ್ಲಿದ್ದರೂ, ಅದು ಬಹಳ ಸುಲಭವಾಗಿದೆ, ಎಲ್ಲರಿಗೂ ಸುಲಭವಾಗಿ ಅರ್ಥವಾಗುವಂತಿದೆಯೆಂದು ನಾನು ಭಾವಿಸಿದ್ದೇನೆ.

**೨) (ಇಂಗ್ಲೀಷ ಭಾಷಣದ ಕನ್ನಡ ಭಾಷಾಂತರ)**

ಸ್ನೇಹಿತರೇ, ನನ್ನನ್ನು ಈ ಉನ್ನತ ಸ್ಥಾನಕ್ಕೆ ಆರಿಸಿ ಗೌರವಿಸಿದ್ದಕ್ಕಾಗಿ ನಾನು ನಿಮಗೆಲ್ಲರಿಗೂ ಆಭಾರಿಯಾಗಿದ್ದೇನೆ. ನೀವು ನನ್ನಲ್ಲಿಟ್ಟ ನಂಬಿಕೆ ಹಾಗೂ ನನ್ನ ಕುರಿತು ಆಡಿದ ಅನೇಕ ಒಳ್ಳೆಯ ಮಾತುಗಳಿಗೆ ನಾನು ಋಣಿ.

ನನ್ನ ಮೇಲೆ ತಾವೆಲ್ಲರೂ ಇರಿಸಿದ ಗೌರವಕ್ಕೆ ನಾನು ಅತ್ಯಂತ ಪ್ರಸನ್ನನಾಗಿದ್ದರೂ ಈ ಸ್ಥಾನವನ್ನು ಒಪ್ಪಿಕೊಳ್ಳುವುದರ ಹಿಂದಿರುವ ಗುರುತರ ಜವಾಬ್ದಾರಿಯ ಕಲ್ಪನೆ ನನಗಿದೆ. ಸದನದ ಸದಸ್ಯರು ಯಾವುದೇ ಪಕ್ಷದವರಿರಲಿ ಅಥವಾ ಪಕ್ಷಾತೀತರಾಗಿರಲಿ, ನಾನು ಪ್ರತಿಯೊಬ್ಬರಿಗೂ ನಿಷ್ಪಕ್ಷಪಾತಿಯಾಗಿರಲು ಯತ್ನಿಸುತ್ತೇನೆ. ವಿಧಾನಮಂಡಲದಲ್ಲಿ ಆಡಳಿತ ಹಾಗೂ ವಿರೋಧ-ಪಕ್ಷಗಳೆರಡನ್ನೂ ಒಂದೆ ತಕ್ಕಡಿಯಲ್ಲಿಟ್ಟು ನೋಡುತ್ತೇನೆ. ನಾನು ಈ ಗೃಹದ ಗೌರವ ಹಾಗೂ ಪ್ರತಿಷ್ಠೆಗಳನ್ನು ಎತ್ತಿಹಿಡಿಯಲು ಮತ್ತು ರಾಷ್ಟ್ರದ ತುಂಬ ಧೀರ್ಘಕಾಲದಿಂದಲೂ ದೇಶಸೇವೆಯಲ್ಲಿ ಪ್ರಖ್ಯಾತವಾದ ಮೈಸೂರಿನ ಘನತೆಯನ್ನು ಎತ್ತಿಹಿಡಿಯುತ್ತೇನೆ.

ಮೈಸೂರಿನ ವಿಧಾನ ಪರಿಷತ್ತು ಹಾಗೂ ಪ್ರಜಾಪ್ರತಿನಿದಿ ಸಭೆಗಳು ತಮ್ಮ ಸಭಾ ನಡವಳಿಗಳು ಮತ್ತು ಉನ್ನತ ಮಟ್ಟದ ಚರ್ಚೆಗೆ ಹೆಸರುವಾಸಿಯಾದವು. ಈ ಕೀರ್ತಿಯನ್ನು ಉಳಿಸಿ, ಬೆಳೆಸುವುದು ನಮ್ಮೆಲ್ಲರ ಮಹತ್ವದ ಕರ್ತವ್ಯವಾಗಿದೆ. ಇದೆಲ್ಲವೂ ಸದಸ್ಯರ ಮೇಲೆ, ಅವರ ಶಿಸ್ತು, ಸಂಯಮ ಹಾಗೂ ಕರ್ತವ್ಯ ದೃಷ್ಟಿಗಳ ಪ್ರಜ್ಞೆಯ ಆದಾರದ ಮೇಲೆ ನಿಂತಿವೆ.

ತಾವೆಲ್ಲರೂ ಸಮಾಜಸೇವೆಯಲ್ಲಿ ನುರಿತವರಿದ್ದೀರಿ ಹಾಗೂ ರಾಜ್ಯದ ಜನತೆಯ ದಾರಿದ್ರ್ಯ, ಅಜ್ಞಾನ ಮತ್ತೂ ಅನಾರೋಗ್ಯದ ವಿರುದ್ಧ ಸಮರಸಾರಲು ಉತ್ಸುಕರಿದ್ದೀರಿ. ನಮಗೆಲ್ಲ ತಿಳಿದಿರುವಂತೆ ಸರ್ಕಾರದ ಉದ್ದೇಶವೂ ಇದೇ ಆಗಿದೆ. ಈ ಏಕಮೇವಧ್ಯೇಯದಿಂದ ನಾವೆರಡೂ ಗುಂಪುಗಳು ಸೇರಿ ಒಗ್ಗಟ್ಟಿನಿಂದ ಶ್ರಮ ಪಟ್ಟರೆ ಜನಸಾಮಾನ್ಯನ ಜೀವನಮಟ್ಟವನ್ನು ಮೇಲೆತ್ತುವ ಕಾರ್ಯದಲ್ಲಿ ನಾವು ಜಯಗಳಿಸಲು ಹಾಗೂ ದೇಶವನ್ನು ಪ್ರಗತಿಯತ್ತಕೊಂಡೊಯ್ಯಲು ಸಾಧ್ಯ.

ಇಂಥ ಕಾರ್ಯದಲ್ಲಿ ಸದಸ್ಯರು ಚರ್ಚೆಯಲ್ಲಿ ಕಾವೇರಿಸುವುದಕ್ಕಿಂತ ವಿಷಯಗಳ ಮೇಲೆ ಬೆಳಕು ಚಲ್ಲಲು ಹೆಚ್ಚಾಗಿ ಶ್ರಮಿಸುವರೆಂದು ನಾನು ಆಷಿಸುತ್ತೇನೆ.

ಪೂರ್ಣವಾಗಿ ಸಂವಿಧಾನಾತ್ಮಕವಾಗಿದ್ದೂ ಭಾವನೆಗಳನ್ನು ಕೆರಳಿಸುವ ಮತ್ತು ದೌರ್ಬಲ್ಯಗಳನ್ನು ಎತ್ತಿತೋರಿಸುವ ಅನೇಕ ಬಗೆಗಳಿರುವುದು ನಮಗೆಲ್ಲ ಗೊತ್ತು. ಅಂಥವುಗಳನ್ನು ನಾವು ದೂರವಿಡಬೇಕೆಂಬುದನ್ನು ನಾನು ಒತ್ತಿ ಹೇಳುವ ಅಗತ್ಯವಿಲ್ಲ.

ಈಗ ಸ್ನೇಹಿತರಾಗಿರುವ ಹಾಗೆ, ಸದ್ಯಸರು ಸಭೆಯಲ್ಲಿ ಪರಸ್ಪರರನ್ನು ಕುರಿತು ತಮ್ಮ ಭಾಷೆಯ ಬಳಕೆಯಲ್ಲಿಯೂ ಸಹಕಾರಿಗಳಾಗಿರಬೇಕೆಂದು ಕೋರುತ್ತೇನೆ. ಶಬ್ದಗಳು ಸಾಮ್ರಾಜ್ಯವನ್ನು ಉಳಿಸುತ್ತವೆ ಇಲ್ಲ ಅಳಿಸುತ್ತವೆ. ಅವುಗಳ ಶಕ್ತಿಯು ಒಳ್ಳೆಯ ಹಾಗೂ ಕೆಟ್ಟ ಗುಣಗಳೆರಡನ್ನೂ ಪ್ರಭಾವಿಸಬಲ್ಲದು. ಈ ವಿಷಯ ಕುರಿತು ನಾನು ಹೆಚ್ಚಿಗೆ ಹೇಳಬೇಕಾಗಿಲ್ಲ. ಪ್ರತಿಯೋಗೀವ ಸದಸ್ಯರೂ ಸದನದ ಉಳಿದ ಸದಸ್ಯರೊಂದಿಗೆ ವಿವೇಕಯುತವಾಗಿ ವರ್ತಿಸುವರೆಂದು ತಿಳಿದ್ದಿದೇನೆ.

ಈ ಸದನದ ಸದಸ್ಯರಾದ ನಾವು 'ಹಿರಿಯ'ರೆಂದೂ, ಈ ಸದನವನ್ನು 'ಮೇಲ್ಮನೆ' ಯೆಂದೂ ಹೇಳಲಾಗುತ್ತಿದೆ. ನಾವು ಇಲ್ಲಿಂದ ಹೋಗುವ ಮೊದಲುತುಂಬ ಮೇಲ್ಮಟ್ಟದ. ....

ನಾನು ಮತ್ತೊಮ್ಮೆ ವೈಯುಕ್ತಿಕವಾಗಿ ಹಾಗೂ ಸಮುದಾಯಿಕವಾಗಿ ತಮಗೆಲ್ಲರಿಗೂ ನನ್ನನ್ನು ಈ ಪೀಠಕ್ಕೆ ತಂದುದಕ್ಕಾಗಿ ನನ್ನ ಹೃದಯ ತುಂಬಿದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**೩) ದಿನಾಂಕ ೧೨.೪.೧೯೫೩ ರಂದು ಮೈಸೂರು ವಿಧಾನ ಪರಿಷತ್ತಿನಲ್ಲಿ ಮಾಡಿದ ಅಧ್ಯಕ್ಷೀಯ ಮುಕ್ತಾಯ ಭಾಷಣ:**

ಸಭಾಗೃಹವು ಅಡ್ಜರ್ನ್ ಆಗುವ ಪೂರ್ವದಲ್ಲಿ ನಾನು ಮಾನ್ಯ ಸದಸ್ಯರೆದುರಿನಲ್ಲಿ ಕೆಲವು ಸಂಗತಿ ಮತ್ತು ಸಂಖ್ಯೆಗಳನ್ನು ತೆಗೆದಿರಿಸಲು ಇಚ್ಛಿಪಡುತ್ತೇನೆ. ನಾವು ಎರಡೂ ಮನೆಗಳ ಸಂಯುಕ್ತ ಸದನವನ್ನು ಹೊರತು ಪಡಿಸಿ ಒಟ್ಟಿಗೆ ೨೦ ದಿನಗಳು ಕುಳಿತು ೧೫ ಬಿಲ್ಲುಗಳನ್ನು ಪಾಸ್ ಮಾಡಿದ್ದೇವೆ, ಒಂದನ್ನು ಸಲೆಕ್ಟ್ ಸಮಿತಿಗೆ ಕಳಿಸಿಕೊಟ್ಟಿದ್ದೇವೆ, ಹಾಗೂ ಮತ್ತೊಂದನ್ನು ಜಾಯಿಂಟ್ ಸಲೆಕ್ಟ್ ಸಮಿತಿಗೆ ಕಳಿಸಿಕೊಟ್ಟಿದ್ದೇವೆ. ೨೨ ಗೊತ್ತುವಳಿಗಳು ಸದನದೆದುರು ಮಂಡನೆಗೆ ಬಂದಿದ್ದು ಅವುಗಳಲ್ಲಿ ೭ ಗೊತ್ತುವಳಿಗಳು ಚರ್ಚೆಯ ನಂತರ ಹಿಂತೆಗೆದುಕೊಳ್ಳಲ್ಪಟ್ಟಿವೆ. ಒಂದು ಹಕ್ಕುಬಾಧ್ಯತಾ ನಿಲುವಳಿಯು ಎತ್ತಲ್ಪಟ್ಟಿದ್ದು ಆದನ್ನು ಪ್ರಿವಿಲೇಜ್ ಕಮಿಟಿಗೆ ಕಳಿಸಲಾಗಿದೆ. ಈ ಅವಧಿಯಲ್ಲಿ ಎತ್ತಲ್ಪಟ್ಟ ೮೨ ಪ್ರಶ್ನೆಗಳಲ್ಲಿ ೭೯ ಪ್ರಶ್ನೆಗಳು ಉತ್ತರಿಸಲ್ಪಟ್ಟಿವೆ. ಅಲ್ಲದೆ ಗುರುತು ಮಾಡದ (unstarred) ೭೫ ಪ್ರಶ್ನೆಗಳಲ್ಲಿ ೭೩ಕ್ಕೆ ಉತ್ತರಿಸಲಾಗಿದೆ. ಸಂಕ್ಷಿಪ್ತ ಟಿಪ್ಪಣಿಯ ೪ ಪ್ರಶ್ನೆಗಳಲ್ಲಿ

೩. ಅಡ್ಮಿಟ್ ಆಗಿದ್ದು ಆ ಮೂರನ್ನೂ ಉತ್ತರಿಸಲಾಗಿದೆ. ಈ ಕುರಿತು ಇನ್ನೂ ಏನಾದರೂ ಹೆಚ್ಚಿನ ಮಾಹಿತಿಗಳು ಬೇಕಿದ್ದಲ್ಲಿ ಕಚೇರಿಯಲ್ಲಿ ಲಭ್ಯವಿದೆ.

ಅಧಿವೇಶನದುದ್ದಕ್ಕೂ ಸದಸ್ಯರು ತೋರಿಸಿದ ಸಹಕಾರ ಹಾಗೂ ಸಾಮರಸ್ಯಗಳಿಗೆ ನಾನು ಸನ್ಮಾನ್ಯ ಸದಸ್ಯರಿಗೆ ಅತ್ಯಂತ ಅಭಾರಿಯಾಗಿದ್ದೇನೆ. ವಿರೋಧಿಪಕ್ಷಗಳು ಆಡಳಿತ ಪಕ್ಷಕ್ಕೆ ತೋರಿಸಿದ ಹೊಂದಾಣಿಕೆಯ ಮನೋಭಾವದಿಂದ ನಾನು ಚಕಿತನಾಗಿದ್ದೇನೆ ಹಾಗೂ ಇಂಥ ಸಹಕಾರವು ಯಾವಾಗಲೂ ಮುಂದುವರಿಯುವುದೆಂದು ಆಶಿಸುತ್ತೇನೆ.

ಈಗ ಸದನವು ಎಡ್ಜರ್ನ್ ಆಗಲಿದ್ದು ಪುನಃ ಜೂನ್ ೧೫, ೧೯೫೩ರಂದು ಸೇರುವುದು.

ಧನ್ಯವಾದಗಳು.

ಭಾಷ್ಯಂ ಅವರ ಕರ್ತವ್ಯ ನಿಷ್ಠೆ ಎಲ್ಲರಿಗೂ ಮಾದರಿಯಾಗುವಂತಹದು. ಪ್ರಜಾಪ್ರಭುತ್ವದಲ್ಲಿ ಅವರಿಗೆ ಅಚಲವೂ ಅಪಾರವೂ ಆದ ನಂಬಿಕೆ. ಜನಶಕ್ತಿಯಲ್ಲಿ ಅವರಿಗಿದ್ದ ನಿಷ್ಠೆ ಅತೌಲನೀಯ. ತಾವು ಮಾಡುತ್ತಿರುವ ಕೆಲಸದಲ್ಲಿ ಭಾಷ್ಯಂ ಅವರಿಗೆ ನಿತ್ಯ ಮುಂಜಾನೆಯ ಪೂಜೆಯಷ್ಟೇ ಶ್ರದ್ಧೆ. ಸ್ವತಂತ್ರ ಭಾರತದಲ್ಲಿ ಎಲ್ಲರಿಗೂ ಅಧಿಕಾರ, ಎಲ್ಲರ ಮಾತಿಗೂ ಗೌರವ ಹಾಗೂ ಎಲ್ಲರೂ ತಮಗೆ ದತ್ತವಾದ ಸ್ವಾತಂತ್ರ್ಯವನ್ನು ನಿರ್ಭೀತಿ-ನಿರ್ಭಿಡೆಗಳಿಂದ ಉಪಭೋಗಿಸುವಂಥ ಸಾಮಾಜಿಕ ವ್ಯವಸ್ಥೆಯಿರಬೇಕೆಂದು ಕನಸು ಕಂಡವರು ಭಾಷ್ಯಂ. ಈ ಕನಸನ್ನು ನನಸಾಗಿಸುವ ದಾರಿಯಲ್ಲಿ ತಮ್ಮ ಕೆಲವೇ ವರ್ಷಗಳ ರಾಜಕೀಯ ಅಧಿಕಾರಾವಧಿಯಲ್ಲಿ ಅವರು ವರ್ತಿಸಿದರು. ಉದಾಹರಣೆಗೆ ಪ್ರಜೆಗಳು ಪ್ರಭುಗಳನ್ನು ಭೇಟಿ ಮಾಡಿ ಮಾತಾಡಿಸುವುದೇ ಅಸಂಭವವಾಗಿರುವ ಇಂದಿನ ದಿನಗಳಲ್ಲಿ ಎಲ್ಲರಿಗೂ ಯಾವಾಗ ಬೇಕಾದರೂ ದೊರೆಯುತ್ತಿದ್ದ ಭಾಷ್ಯಂರಂಥ ವ್ಯಕ್ತಿಗಳು ಪೌರಾಣಿಕ ಕಥೆಗಳಲ್ಲಿ ಬರುವ ನಾಯಕರಂತೆ ಎನಿಸಿದರೆ ಆಶ್ಚರ್ಯವಿಲ್ಲ. ಅವರ ಕರ್ತವ್ಯ ನಿರ್ವಹಣೆಯ ವಿಧಾನ ಎಲ್ಲರಿಗೂ ಆದರ್ಶಪ್ರಾಯವಾದದು. ಇಂಥ ಅನೇಕ ಉದಾಹರಣೆಗಳಲ್ಲಿ ಒಂದೆರಡನ್ನಷ್ಟೇ ಇಲ್ಲಿ ತೆರೆದಿಡುವ ಯತ್ನ ಮಾಡಲಾಗಿದೆ.

ಏಪ್ರಿಲ್ ೨೧, ೧೯೫೩ರಂದು ಮೈಸೂರು ವಿಧಾನ ಪರಿಷತ್ತಿನ ಅಧಿವೇಶನ. ಕೆ.ಟಿ. ಭಾಷ್ಯಂ ಅಯ್ಯಂಗಾರ್ ಅವರೇ ಪರಿಷತ್ತಿನ ಅಧ್ಯಕ್ಷರು. ಸಾಯಂಕಾಲ ಅಧಿವೇಶನವನ್ನು ೫.೩೦ಕ್ಕೆ ಬದಲಾಗಿ ೪.೩೦ಕ್ಕೇ ಮುಗಿಸಿ ಸದಸ್ಯರಲ್ಲಿ ಅನೇಕರು ನಾಗಮಂಗಲಕ್ಕೆ ಭೇಟಿ ನೀಡುವ ಕಾರ್ಯಕ್ರಮವಿತ್ತು. ಆದರೆ ಪರಿಷತ್ತು ಒಂದು ಘಂಟೆ ಮೊದಲೇ ಮುಗಿಸುವುದು ಸೂಕ್ತವೇ? ಭಾಷ್ಯಂ ಈ ವಿಷಯವನ್ನು ಪರಿಷತ್ತಿನ ಮುಂದಿಟ್ಟು ಸದಸ್ಯರೆಲ್ಲರ ಅನುಮತಿ ಕೋರಿದರು. 'ಈ ವಿಷಯದಲ್ಲಿ ಸದಸ್ಯರ ಅನುಮತಿ ದೊರಕದಿದ್ದರೆ ಸಭೆಯನ್ನು ೫.೩೦ರ ವರೆಗೆ ನಡೆಸುವುದು ಅಗತ್ಯ' ಎನ್ನುವುದು ಭಾಷ್ಯಂ ಅವರ ಅಭಿಪ್ರಾಯವಾಗಿತ್ತು. ಜನವರಿ ೨೧, ೧೯೫೪ರಂದು ಪರಿಷತ್ ಸಭೆಯಲ್ಲಿ ಸಭಾಪತಿಗಳ ಪೀಠದಿಂದ ಅವರು ಹೇಳಿದ ಮಾತು ಇಂದಿಗೂ ಪರಿಷತ್ತಿನ ಕಾರ್ಯಕಲಾಪಗಳಿಗೆ ಮಾರ್ಗದರ್ಶನ ನೀಡುವಂತಹದು. 'ಸರ್ಕಾರವು ಪ್ರಶ್ನೆಗಳಿಗೆ ಸೂಕ್ತ ಉತ್ತರವನ್ನು ನೀಡುವಲ್ಲಿ ವಿಳಂಬ ಮಾಡುವುದರಿಂದ ಮಾನ್ಯ ಸದಸ್ಯರನೇಕರ ಹಲವು ಪ್ರಶ್ನೆಗಳಿಗೆ ಉತ್ತರಿಸಲು ಹಾಗೂ ಅವುಗಳನ್ನು ಚರ್ಚಿಸಲು ಸಾಧ್ಯವೇ ಆಗುವುದಿಲ್ಲ. ಈ ನಿಟ್ಟಿನಲ್ಲಿ ಸರ್ಕಾರವು ಅತಿಹೆಚ್ಚಿನ ಜಾಗ್ರತೆ ಹಾಗೂ ಆಸ್ಥೆ ವಹಿಸಿದಾಗಲಷ್ಟೇ ಅಭಿವೃದ್ಧಿ ಕಾರ್ಯಗಳು ಸರಿಯಾಗಿ ನೆರವೇರಲು ಸಾಧ್ಯ' ಎಂದೂ ಭಾಷ್ಯಂ ಅಂದಿನ ಸರ್ಕಾರಕ್ಕೆ ಆ ದಿನ ಗಂಭೀರ ಎಚ್ಚರಿಕೆ ನೀಡಿದ್ದರು.

ಭಾಷ್ಯಂ ಅಯ್ಯಂಗಾರ್ ಅವರ ಸುಂದರ, ಸಾಹಿತ್ಯಿಕ ಭಾಷೆಯ ಬಳಕೆಯ ಕುರಿತು ಈ ಮೊದಲೇ ಬರೆದಿದ್ದೇನಲ್ಲವೆ? ಇದು ಅವರ ಲೇಖನ, ಭಾಷಣಗಳಿಗಷ್ಟೇ ಸೀಮಿತವಾಗಿರಲಿಲ್ಲವೆಂಬುದು ಇಲ್ಲಿ ಗಮನಿಸಬೇಕಾದ ಅಂಶ. ವಿಧಾನ ಪರಿಷತ್ತಿನ ಸಭಾಪತಿಗಳಾಗಿ ಅವರು ನೀಡಿದ ನಿರ್ಣಯಗಳು (ರೂಲಿಂಗ್) ಭಾಷೆಯ ಅತ್ಯಂತ ಸಮರ್ಪಕ ಬಳಕೆಯ ಸಮರ್ಥ ಉದಾಹರಣೆಗಳು. ಭಾಷ್ಯಂ ಅವರ ಅನೇಕ ರೂಲಿಂಗ್‌ಗಳು ಇಂದಿಗೂ 'ಆದರ್ಶ ಮಾದರಿ' (ಐಡಿಯಲ್ ಟೈಪ್) ಗಳಾಗಿ ಸಂಸದರಿಂದ ಉಲ್ಲೇಖಿಸಲ್ಪಡುತ್ತವೆ. ಇಂಥ 'ರೂಲಿಂಗ್' ಗಳ ಕೆಲವೇ ಕೆಲವು ನಿದರ್ಶನಗಳನ್ನು ನಾನು ಇಲ್ಲಿ ಉಲ್ಲೇಖಿಸಬಯಸುತ್ತೇನೆ.

ಅಕ್ಟೋಬರ್ ೨೦, ೧೯೫೨ರಂದು ಮಧ್ಯಾಹ್ನ ೪:೦೦ ಘಂಟೆ. ಮೈಸೂರು ವಿಧಾನ ಪರಿಷತ್ತಿನಲ್ಲಿ ಆಡಳಿತ ರಂಗದ ಹಾಗೂ ವಿರೋಧ ಪಕ್ಷಗಳ ಸದಸ್ಯರೆಲ್ಲರೂ ಗಂಭೀರ ಚರ್ಚೆಯಲ್ಲಿ ತೊಡಗಿದ್ದರೂ ಕೂಡ ಪರಸ್ಪರರಲ್ಲಿ ಚಕಮುಕಿ. ಬಿಸಿಯೇರಿದ ವಾತಾವರಣ. ಆ ಸಮಯದಲ್ಲಿ ಚರ್ಚೆಯ ನಂತರ ಭಾಷ್ಯಂ ಹೇಳಿದ ಮಾತುಗಳು ಪದೇ ಪದೇ ಮೆಲುಕು ಹಾಕುವಂತಹವು.

"...... We see that all questions printed for the day are taken up that day and only a very few allowed to lapse if we cannot possibly reach them. I feel that almost all questions are being reached. I want you to understand the principle on which the present system is based. It is that every question should be answered by Government. It must be open to us to ask supplementary questions on any question."

(ದಿನದ ಪ್ರಶ್ನೋತ್ತರ ವೇಳೆಗೆಂದು ಯಾದಿ ಮಾಡಿದ ಪ್ರಶ್ನೆಗಳೆಲ್ಲವೂ ಆ ದಿನವೇ ಚರ್ಚಿಸಲ್ಪಡಬೇಕು ಹಾಗೂ ತೀರ ತೊಂದರೆಯಾದಲ್ಲಿ ಮಾತ್ರ ಕೆಲವೇ ಕೆಲವು ಪ್ರಶ್ನೆಗಳು ರದ್ದಾಗಬಹುದು. ಸದ್ಯ ಜಾರಿಯಲ್ಲಿರುವ ವ್ಯವಸ್ಥೆಯ ತಳಪಾಯವಾದ ಸಿದ್ಧಾಂತವನ್ನು ನೀವೆಲ್ಲರೂ ಅರಿತುಕೊಳ್ಳಬೇಕೆಂದು ನಾನು ಬಯಸುತ್ತೇನೆ. ಅದೆಂದರೆ ಕೇಳಿದ ಎಲ್ಲ ಪ್ರಶ್ನೆಗಳೂ ಸರ್ಕಾರದಿಂದ ಸರಿಯಾಗಿ ಉತ್ತರಿಸಲ್ಪಡಲೇಬೇಕು ಹಾಗೂ ಇವುಗಳಿಗೆ ಉಪಪ್ರಶ್ನೆಗಳನ್ನು ಕೇಳುವ ಹಕ್ಕು ನಮ್ಮದಾಗಿರಬೇಕು.)

ಇದೇ ಅಧಿವೇಶನದಲ್ಲಿ ೨೪.೧೦.೧೯೫೨ರಂದು ಚಲನಚಿತ್ರಗಳಿಂದ, ಸಿನೇಮಾ ಮಂದಿರಗಳಿಂದ, ಸಾಮಾನ್ಯ ಜನರ ಶಾಂತಿ ಭಂಗವಾದಲ್ಲಿ ಇಂಥ ಸಿನೇಮಾ ಮಂದಿರಗಳ ಮಾಲೀಕರಿಗೆ ಯಾರು ಶಿಕ್ಷೆ ವಿಧಿಸಬಹುದು ಎಂಬ (ಕ್ಲಾಸ್ ೭) ಚರ್ಚೆಯಲ್ಲಿ ನೀಡಿದ ರೂಲಿಂಗ್‌ನಲ್ಲಿ ಅವರು ಕಾನೂನು ಭಾಷೆಯ ಬಳಕೆಯಲ್ಲಿ ತೋರಿಸುತ್ತಿದ್ದ ಎಚ್ಚರಿಕೆ ವ್ಯಕ್ತವಾಗುತ್ತದೆ. ಇಲ್ಲಿ '........ ಜಿಲ್ಲಾ ನ್ಯಾಯಾಧೀಶರಿಂದಲ್ಲ. ಕಾನೂನಿನ ಪ್ರಕಾರದಂತೆ' ("shall be punishable not by the District Magistrate, but in accordance with law") ಎನ್ನುವ ಅವರ ಭಾಷೆಯ ಸ್ಪಷ್ಟ ಹಾಗೂ ಶುದ್ಧ ಬಳಕೆ ಎಂಥವರನ್ನೂ ದಂಗುಬಡಿಸುತ್ತದೆ. ಹಾಗೆಯೇ, ಮಾರ್ಚ್ ೭, ೧೯೫೩ರಂದು ಜೋಸೆಫ್ ಸ್ಟಾಲಿನ್ ಮರಣದ ಸಂತಾಪಸೂಚಕ ಸಂದೇಶಕ್ಕಾಗಿ, ಪರಿಷತ್ತಿನ ಸಭಾಪತಿಗಳಾಗಿ, ಅವರು ನೀಡಿದ ಸಂದೇಶ ಭಾವನೆಗಳ ಅಭಿವ್ಯಕ್ತಿ ಮತ್ತು ಭಾಷೆಯ ಅತ್ಯುತ್ಕೃಷ್ಟ ಬಳಕೆಗಾಗಿ ಪ್ರಸಿದ್ಧವಿದೆ.

ಜನವರಿ ೧೫, ೧೯೫೪ರಂದು ಮೈಸೂರು ಪಬ್ಲಿಕ್ ಸರ್ವೀಸ್ ಕಮೀಷನ್‌ಗೆ ಸಂಬಂಧಿಸಿದ ವರದಿಯ ಚರ್ಚೆಯ ನಂತರ ಭಾಷ್ಯಂ ಸುಮಾರು ಎರಡು ಪುಟಗಳ ದೀರ್ಘ ರೂಲಿಂಗ್ ನೀಡಿದರು. ಇದೂ ಕೂಡ ಕರ್ನಾಟಕದ ವಿಧಾನ ಪರಿಷತ್ತಿನ ಇತಿಹಾಸದಲ್ಲಿ ಒಂದು ಮಹತ್ವದ ರೂಲಿಂಗ್ ಎನಿಸಿದೆ.

ಭಾಷ್ಯಂ ಅವರು ಸ್ವತಂತ್ರ ಮೈಸೂರಿನ ಮೊದಲನೆಯ ಕಾನೂನು ಸಚಿವರಾಗಿ, ಕಾರ್ಮಿಕ ಸಚಿವರಾಗಿ, ವಿಧಾನಪರಿಷತ್ತಿನ ಸಭಾಪತಿಗಳಾಗಿ ತಮ್ಮ ಕಾರ್ಯಗಳನ್ನು ಉಳಿದವರಿಗೆ ಮಾದರಿಯಾಗುವ ರೀತಿಯಲ್ಲಿ ನಿರ್ವಹಿಸಿದರು. ಅವರ ಕರ್ತವ್ಯಪ್ರಜ್ಞೆ ಎಷ್ಟು ಜಾಗ್ರತವಿತ್ತೆಂಬುದನ್ನು ಅವರನ್ನು ಹತ್ತಿರದಿಂದ ಬಲ್ಲ ಕರ್ನಾಟಕದ ಹಿರಿಯ ರಾಜಕಾರಣಿಗಳೆಲ್ಲರೂ ಮನದುಂಬಿ ಹೊಗಳಿದ್ದಾರೆ. ವಿಧಾನಸೌಧದ ಗ್ರಂಥಾಲಯದಲ್ಲಿರುವ 'ಮೈಸೂರು ವಿಧಾನಪರಿಷತ್ತಿನ ಚರ್ಚೆಗಳು' ವರದಿಗಳಲ್ಲಿ ಈ ಕುರಿತು ಅನೇಕ ಉಲ್ಲೇಖಗಳನ್ನು ನಾವು ಕಾಣಲು ಸಾಧ್ಯ.

## ಅಧ್ಯಾಯ - 4

### ಭಾಷ್ಯಂ ಅವರ ಸ್ವಾತಂತ್ರ್ಯಪೂರ್ವದ ಅವಧಿಯ ಕೆಲವು ಪ್ರಮುಖ ಭಾಷಣಗಳು:

**೧) ಅಕ್ಟೋಬರ್ ೯, ೧೯೩೭ರಂದು ಭಾಷ್ಯಂ ಅಯ್ಯಂಗಾರ್ ಅವರು ಮೈಸೂರು ಸಂಸ್ಥಾನದಲ್ಲಿ ಇದ್ದ ಗಂಭೀರ ರಾಜಕೀಯ, ಆರ್ಥಿಕ ಪರಿಸ್ಥಿತಿಗಳ ಕುರಿತು ಮಾಡಿದ ಭಾಷಣದ ಮುಖ್ಯ ಅಂಶಗಳು.**

ಮೈಸೂರು ಸಂಸ್ಥಾನವು ತುಂಬ ಮುಂದುವರಿದ ರಾಜ್ಯ ಮಾದರಿ ಸಂಸ್ಥಾನ ಎಂದು ಕೀರ್ತಿಗಳಿಸಿದೆ. ಇದರಲ್ಲಿ ಸತ್ಯಾಂಶವಿಲ್ಲವೆಂದು ಹೇಳಲಾಗದು. ಇಲ್ಲಿನ ತಂಪಾದ ಹವಾಗುಣ, ಫಲವತ್ತಾದ ಭೂಮಿ, ಸುಗಂಧಭರಿತ ಪುಷ್ಪಗಳು, ಹಣ್ಣು, ಹೂವು, ತರಕಾರಿ, ಯಥೇಚ್ಛವಾದ ನೀರು, ಒಳ್ಳೆಯ ಜನ, ಆದರ್ಶ ಮಹಾಜನರು ಮತ್ತು ಆಡಳಿತ ನಿಪುಣ ದಿವಾನರು ಈ ರೀತಿ ಭಾಷಣ ಮಾಡುತ್ತ ಪತ್ರಿಕೆಗಳಲ್ಲಿ ಲೇಖನ ಬರೆದು ಪ್ರಕಟಿಸುತ್ತಾ ಮೈಸೂರನ್ನು ಹೊಗಳುವರು. ಸ್ವಲ್ಪ ಮಟ್ಟಿಗೆ ಇವೆಲ್ಲ ನಿಜವಿರಬಹುದು. ಕೋಲಾರದ ಚಿನ್ನದ ಗಣಿಗಳು ಈ ನಾಡಿನ ಐಶ್ವರ್ಯ, ಆದಿಶಂಕರರು, ರಾಮಾನುಜಾಚಾರ್ಯರು ಮೈಸೂರಿನಲ್ಲಿ ಕೆಲ ಕಾಲವಾದರೂ ಬಂದು ನೆಲೆಸಿದ್ದರು. ಬಸವಣ್ಣನವರು ಪ್ರತ್ಯೇಕ ಮತದ ಸ್ಥಾಪಕರಾದರು. ಈ ವಿಷಯಗಳನ್ನು ಗಮನಕ್ಕೆ ತೆಗೆದುಕೊಂಡ ಆಗುಂತಕರು ಸಂಸ್ಥಾನವನ್ನು ಹೊಗಳಿರುವುದರಲ್ಲಿ ಆಶ್ಚರ್ಯಪಡಬೇಕಾದುದಿಲ್ಲ. ಇವರೆಲ್ಲ ರಾಜ ಅತಿಥಿಗಳು. ಮಹಾರಾಜರ ಅತಿಥಿಗಳಾಗಿ ಮೃಷ್ಟಾನ್ನ ಭೋಜನ ಮಾಡಿ, ಕೈ ತುಂಬ ಹಣ ಪಡೆದು, ಅನ್ಯ ಮಾತನಾಡಲು ಹೇಗೆ ಸಾಧ್ಯವಾದೀತು. ಉಪ್ಪು ತಿಂದ ಮನೆಗೆ ಎರಡು ಬಗೆಯುವುದುಂಟೆ?

ವೃತ್ತಪತ್ರಿಕೆಗಳು ಮೈಸೂರಿನ ಸೊಬಗು, ಸೌಂದರ್ಯ, ಸುಗಮ ಆಡಳಿತ, ಜನಪ್ರಿಯ ಮಹಾರಾಜ ಇವನ್ನು ಹೊಗಳುವುದರಲ್ಲಿ ಪತ್ರಿಕೆಗಳ ಪಾತ್ರ ಗಮನಾರ್ಹ. ಪತ್ರಿಕೆಗಳಿಗೆ ಸರ್ಕಾರ ಜಾಹಿರಾತುಗಳನ್ನು ನೀಡಿ ಪರೋಕ್ಷವಾಗಿ ಉದಾರ ಧನ ಸಹಾಯ ಮಾಡುವುದು. ದಸರಾ ಹಾಗೂ ಮಹಾರಾಜರ ಜನ್ಮೋತ್ಸವಗಳಂದು ಪತ್ರಿಕೊದ್ಯಮಿಗಳನ್ನು, ಗಣ್ಯ ವ್ಯಕ್ತಿಗಳನ್ನು ಬರಮಾಡಿ ರಾಜಾತಿಥ್ಯ ನೀಡುವರು. ತೃಪ್ತರಾದವರು ಮಹಾರಾಜರನ್ನೂ ಅವರ ಆಡಳಿತವನ್ನೂ ಹೊಗಳಿ ಬರೆಯುವರು. ವಿದೇಶಿಯರು ಈ ಪತ್ರಿಕೆಗಳನ್ನು ಓದಿ ಮೈಸೂರು ನಿಜಕ್ಕೂ ಮಾದರಿ ಸಂಸ್ಥಾನ ಎಂದು ಭ್ರಮಿಸುವರು. ದಸರೆಯ ಉತ್ಸವದಲ್ಲಿ ವಿಜಯದಶಮಿಯ ದಿನ ಆನೆಯ ಬಂಗಾರದ ಅಂಬಾರಿಯಲ್ಲಿ ಕುಳಿತು, ಆನೆ, ಕುದುರೆ, ಅಶ್ವಾರೂಢ ಸೈನಿಕರು, ಪದಾತಿಗಳು, ಆನೆಯಿಂದ ಎಳೆಯಲ್ಪಡುವ ಗಾಡಿ, ಪಾಶ್ಚಾತ್ಯ ಬ್ಯಾಂಡು, ನಮ್ಮ ದೇಶದ ಸುಶ್ರಾವ್ಯ ನಾಗಸ್ವರ, ನೃತ್ಯಗಾತಿಯರು, ಬಸವಣ್ಣನ ಕೋಲು, ದೊಂಬರ ಆಟ, ಎತ್ತರದ ಮನುಷ್ಯ, ಪಕ್ಕದಲ್ಲೇ ಕುಳ್ಳ, ಮುಖವಾಡ ಧರಿಸಿ ನಗಿಸುವ ಹಾಸ್ಯಗಾರರು, ಕೊಂಬು-ಕಹಳೆ-ಡೋಲು ಮೊದಲಾದ ವಾದ್ಯಗಳು ಮೆರವಣಿಗೆಗೆ ಮೆರಗು ಕಟ್ಟುವವು. ಜಂಬೂ ಸವಾರಿ ಎನಿಸಿಕೊಳ್ಳುವ ಈ ಮೆರವಣಿಗೆ, ಮಹಾರಾಜರ ದರ್ಬಾರ್, ಇವೆಲ್ಲ ಜಗತ್ ಪ್ರಸಿದ್ಧವಾಗಿ ದೇಶ ವಿದೇಶಿಯರನ್ನು ಆಕರ್ಷಿಸುತ್ತದೆ. ಅಂಬಾರಿಯಲ್ಲಿ ಕುಳಿತ ಮಹಾರಾಜರು, ತಮ್ಮ ಪ್ರಜೆಗಳನ್ನು ನೋಡುತ್ತಾ ಕೈಮುಗಿಯುವರು. ಮೆರವಣಿಗೆಯನ್ನು ವೀಕ್ಷಿಸಲು ತಂಡೋಪತಂಡವಾಗಿ ಆಗಮಿಸಿದ್ದ ಜನಸ್ತೋಮ. ಎಂಥ ಮಹಾರಾಜರು, ತಮ್ಮ ಪ್ರಜೆಗಳಿಗೆ

ಕೈಮುಗಿಯುತ್ತಾರೆ. ಇವರು ರಾಜಋಷಿಯೇ ಸರಿ ಎಂದು ಕೊಂಡಾಡುವರು. 'ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ, ಜುಟ್ಟಿಗೆ ಜಾಜಿ ಹೂವು' ಎಂಬ ಗಾದೆಯಂತೆ ಮೆರವಣಿಗೆ ವೀಕ್ಷಿಸಿ ಆನಂದಿಸುವರು.

"ಕೋಲಾರದ ಚಿನ್ನದ ಗಣಿ ಮೈಸೂರಿನ ವೈಶಿಷ್ಟ್ಯವೆಂದು ಹೇಳಿದೆನಷ್ಟೇ" ಎಂದು ಭಾಷ್ಯಂ ಅವರು ತಮ್ಮ ಭಾಷಣ ಮುಂದುವರಿಸುವರು. "ಆದರೆ ಈ ಚಿನ್ನದ ಗಣಿ ನಡೆಸುವವು ಜಾನ್ ಟೈಲರ್ಸ್ ಎಂಬ ಹೆಸರಿನ ವಿದೇಶದ ಕಂಪನಿ". ಗಣಿಯಿಂದ ಕಾರ್ಮಿಕರು ತಮ್ಮ ಜೀವದ ಹಂಗು ತೊರೆದು ಹೊರತಂದ ಬಂಗಾರ ಬ್ರಿಟಿಷ್ ಪ್ರಭುತ್ವಕ್ಕೆ ಸೇರಿದ್ದು, ಮಹಾರಾಜರ ಆಸ್ತಿಯಲ್ಲ. ರಾಜಧನ ಎಂದು ಇಂತಿಷ್ಟು ದೊರೆಯುವುದು ಸರ್ಕಾರಕ್ಕೆ.

ಮದರಾಸಿನಿಂದ ಪ್ರಕಟವಾಗುವ ಹಿಂದೂ ಮತ್ತು ಮದ್ರಾಸ್ ಮೈಲ್ ಪತ್ರಿಕೆಗಳು ಸರ್ಕಾರದ ಒಪ್ಪಿಗೆ ಪಡೆದ ಲೇಖನಗಳನ್ನು ಪ್ರಕಟಿಸುವುದು. ಈ ದೃಷ್ಟಿಯಲ್ಲಿ ಈ ಪತ್ರಿಕೆಗಳು, ಸರ್ಕಾರದ 'ಪಬ್ಲಿಸಿಟಿ' ಇಲಾಖೆಯ ಪಾತ್ರ ವಹಿಸುತ್ತವೆ.

ಮೈಸೂರು ಮಾದರಿ ಸಂಸ್ಥಾನ ಎಂದು ಹೇಳಲು ಹೇಗೆ ಸಾಧ್ಯ ಎಂದು ತನಗೆ ಅರ್ಥವಾಗುತ್ತಿಲ್ಲ ಎಂದು ಭಾಷಣ ಮುಂದುವರಿಸಿದರು ಭಾಷ್ಯಂ. ಕಟ್ಟಾ ಕಾಂಗ್ರೆಸ್ಸಿಗರೂ ಸಹ ಮೈಸೂರು ಸರ್ಕಾರದ ಆತಿಥ್ಯಕ್ಕೆ ಮಣಿದು ಮರುಳಾಗಿ ಸರ್ಕಾರವನ್ನು ಹೊಗಳುತ್ತಾರೆ. ತಾಳ್ಮೆ, ಸಹನೆ ಇವು ಮೈಸೂರಿನವರ ಗುಣಗಳು. ಸರ್ಕಾರ ಮಾಡುವುದೆಲ್ಲ ತಮ್ಮ ಒಳಿತಿಗಾಗಿಯೇ ಎಂದು ಭಾವಿಸಿಕೊಳ್ಳುವ ಮುಗ್ಧ ಜನ. ಬೆಂಗಳೂರು. ಮೈಸೂರು ನಗರಗಳು ವಿದ್ಯುತ್ ಬೆಳಕಿನಿಂದ ಶೋಭಿಸುವುದರಿಂದ ಇದು ಮಾದರಿ ಸಂಸ್ಥಾನ ಎನ್ನೋಣವೆ? ನೆರೆಯ ಹಳ್ಳಿಗಳಿಗೆ ದಯಮಾಡಿಸಿ ಕತ್ತಿ ಗುಪ್ಪೆಗೆ ಬನ್ನಿ. ಇಲ್ಲಿ ವಿದ್ಯುದ್ದೀಪಗಳಿವೆಯೇ?

ಇನ್ನು ಆಹಾರದ ಸ್ಥಿತಿ ಪರಿಶೀಲಿಸೋಣ. ೬೦ ಲಕ್ಷ ಪ್ರಜೆಗಳಲ್ಲಿ (ಅಂದಿನ ಜನಸಂಖ್ಯೆ) ೫೦ ಲಕ್ಷ ಜನರಿಗೆ ಒಪ್ಪತ್ತು ಉಣ್ಣಲು ಹೊಟ್ಟೆ ತುಂಬ ಹಿಟ್ಟಿಲ್ಲ. ಅನ್ನವಿಲ್ಲ. ಅಕ್ಷರ ಜ್ಞಾನವೋ, ೬೦ ಲಕ್ಷದಲ್ಲಿ ೫೪ ಲಕ್ಷ ನಿರಕ್ಷರಕುಕ್ಷಿಗಳು. ಮಾದರಿ ಮೈಸೂರಿಗೆ ಇದು ಶೋಭಿಸುತ್ತದೆಯೇ? ೫೬ ಲಕ್ಷ ಸಾಲಗಾರರು. ಇದು ಮಾದರಿ ಮೈಸೂರು! ಕುಡಿಯುವ ನೀರು, ಶಾಲೆ, ಆಸ್ಪತ್ರೆ ಈ ಸೌಲಭ್ಯಗಳಿಲ್ಲದ ರಾಜ್ಯವನ್ನು ಮಾದರಿ ಸಂಸ್ಥಾನ ಎಂದು ನೀವು ಒಪ್ಪುವಿರಾ? ಖಂಡಿತ ನಾನಂತೂ ಒಪ್ಪಲಾರೆ (ಇಲ್ಲ ಇಲ್ಲ ಎಂದು ಸಭಾ ಸದಸ್ಯರಿಂದ ಧ್ವನಿ).

ಮೈಸೂರು ಸಂಸ್ಥಾನದ ವರಮಾನ ಮೂರು ಮುಕ್ಕಾಲು ಕೋಟಿ. ಈ ಹಣವನ್ನು ನಮಗೆ ಕೊಡಲಿ ಅದನ್ನು ಜನತೆಯ ಅಭ್ಯುದಯಕ್ಕಾಗಿ ಯಾವ ರೀತಿಯಲ್ಲಿ ಬಳಸಬೇಕೆಂದು ಮಾಡಿ ತೋರಿಸುತ್ತೇನೆ. ಬುದ್ಧಿವಂತಿಕೆ ಅಧಿಕಾರಿಗಳಲ್ಲಿ ಮಾತ್ರ ಅಡಗಿಲ್ಲ. ಮದರಾಸಿನ ಸಿ. ರಾಜಗೋಪಾಲಾಚಾರ್ಯರು ಅತ್ಯಂತ ಮೇಧಾವಿ, ದಕ್ಷ ಆಡಳಿತಗಾರ ಎಂದು ಬ್ರಿಟಿಷ್ ಪ್ರಭುತ್ವವೇ ಒಪ್ಪಿಕೊಂಡಿರುತ್ತದೆ. ಇಂದು ಅಧಿಕಾರ ಸ್ಥಾನದಲ್ಲಿರುವವರಿಗಿಂತ ನಾವು ಉತ್ತಮ ಆಡಳಿತ ನೀಡಬಲ್ಲೆವು ಎಂದು ಧೈರ್ಯದಿಂದ ನುಡಿಯುತ್ತೇನೆ, ಸವಾಲ್ ಎಸೆಯುತ್ತೇನೆ. ಅಧಿಕಾರಿಗಳ ಐಶ್ವರ್ಯ ಹೆಚ್ಚಿದಂತೆ ಅವರ ಚಟುವಟಿಕೆಯೂ, ಕಾರುಣ್ಯವೂ ತದನುಗುಣ ಕುಗ್ಗುತ್ತಾ ಬರುತ್ತದೆ.

ಸರ್ಕಾರ ಏನನ್ನೂ ಮಾಡಿಲ್ಲ. ಯಾವ ಉತ್ತಮ ಕೆಲಸವನ್ನೂ ಮಾಡಿಲ್ಲ ಎಂದು ನಾನು ಹೇಳಲಾರೆ. ಏನೋ ಅಲ್ಪ ಸ್ವಲ್ಪ ಒಳ್ಳೆಯ ಕೆಲಸ ಮಾಡಿದ್ದಾರೆ. ಆದರೆ ಅವರ ದಬ್ಬಾಳಿಕೆಯ ಧೋರಣೆಯನ್ನು ಸಹಿಸಲು ಸಾಧ್ಯವಿಲ್ಲ. ಮುಸ್ಲಿಂ ಯುವಕನಿಗೆ ಅಮರ ಕೋಶ್ ಬಾಯಿಪಾಠ ಮಾಡಿ ಒಪ್ಪಿಸು ಎಂದರೆ ಅವನು ಒಪ್ಪಿಕೊಳ್ಳುತ್ತಾನೆಯೇ? ಅವನು ಒತ್ತಾಯಕ್ಕೆ ಮಣಿಯುವುದಿಲ್ಲ. ಅಂತೆಯೇ ದಬ್ಬಾಳಿಕೆಗೆ ನಾವು ತಲೆಬಾಗಬಾರದು, ಮಣಿಯಲಾಗದು.

ನಮ್ಮ ದಿವಾನ್ ಮಿರ್ಜಾ ಸಾಹೇಬರು ಕಣ್ಣೊರೆಸುವ ಕೆಲಸದಲ್ಲಿ ತಂತ್ರದಲ್ಲಿ ತುಂಬ ನಿಪುಣರು. ಮಹಾತ್ಮ ಗಾಂಧಿಯವರನ್ನು ತೃಪ್ತಿಪಡಿಸಿ ಅವರ ಮೆಚ್ಚುಗೆ ಪಡೆಯಲು ಬದನವಾಳಿನಲ್ಲಿ ಒಂದು ಖಾದಿ ಕೇಂದ್ರ ಸ್ಥಾಪಿಸಿರುತ್ತಾರೆ. ಗ್ರಾಮೋದ್ಯೋಗಕ್ಕೆ ನಿಜವಾದ ಪ್ರೋತ್ಸಾಹ ನೀಡಲಾಗುತ್ತಿದೆಯೆ? ಜಿಲ್ಲಾಧಿಕಾರಿಗಳು, ಸರ್ಕಾರದ ಅಧಿಕಾರಿಗಳು ಖಾದಿ ಧರಿಸಿದರೆ ನಮ್ಮ ಹಿಂದೆ ಪೋಲಿಸ್ ಗುಪ್ತಚಾರರು. ಇದೇಕೆ ಈ ನಾಟಕ. (ಸರ್ಕಾರದ ನೌಕರರು ಖಾದಿ ಧರಿಸಲು ಅಭ್ಯಂತರವಿಲ್ಲ ಎಂದು ಸರ್ಕಾರದ ಪ್ರಕಟಣೆ ತದನಂತರ ಹೊರಟಿತು).

ನ್ಯಾಯ ವಿಧಾಯಕ ಸಭೆಯಲ್ಲಿ ಜವಾಬ್ದಾರಿ ಸರ್ಕಾರದ ನಿರ್ಣಯಗಳು ಮಂಡಿಸಲ್ಪಡುತ್ತವೆ. ಅಧ್ಯಕ್ಷರಾದ ದಿವಾನರು ತಾಳ್ಮೆಯಿಂದ ಭಾಷಣಗಳನ್ನು ಕೇಳುತ್ತಾರೆ. ಫಲಿತಾಂಶವೇನು? ಒಂದು ಕಿವಿಯಲ್ಲಿ ಕೇಳಿ ಮತ್ತೊಂದು ಕಿವಿಯಲ್ಲಿ ಬಿಟ್ಟುಬಿಡುತ್ತಾರೆ. ಫಲಿತಾಂಶ ಸೊನ್ನೆ. ಸರ್ಕಾರವಿರುವುದು ಜನಕ್ಕಾಗಿ, ಜನ ಇರುವುದು ಸರ್ಕಾರಕ್ಕೋಸ್ಕರ ಅಲ್ಲ. ಜನರ ಕೋರಿಕೆಯನ್ನು ಸರ್ಕಾರ ಮನ್ನಿಸಬೇಕು. ಆಗ ಜನತಾ ಸರ್ಕಾರ ಎನಿಸಿಕೊಳ್ಳುತ್ತದೆ.

ಮೈಸೂರು ಕಾಂಗ್ರೆಸ್‌ನ ಆಗು ಹೋಗುಗಳನ್ನು ಅಖಿಲ ಭಾರತ ಕಾಂಗ್ರೆಸ್ ಕಾರ್ಯ ಸಮಿತಿ ಎಚ್ಚರಿಕೆಯಿಂದ ಗಮನಿಸುತ್ತಿದೆ. ಅಂತೆಯೇ ಇತರ ರಾಜ್ಯಗಳೂ ಮೈಸೂರು ಕಾಂಗ್ರೆಸ್ ಮುಂದೇನು ಮಾಡಲಿದೆ ಎಂದು ನೋಡುತ್ತಿವೆ. ಆದಕಾರಣ ಪ್ರತಿಯೊಂದು ತಾಲ್ಲೂಕಿನಲ್ಲೂ ಕಾಂಗ್ರೆಸ್ ಸಮಿತಿಗಳನ್ನು ಸ್ಥಾಪಿಸಬೇಕು. ರಾಷ್ಟ್ರೀಯ ಕಾಂಗ್ರೆಸ್‌ನ ಮಾರ್ಗದರ್ಶನಕ್ಕಾಗಿ ನಾವು ಕಾಯುತ್ತ ಕುಳಿತಿರಲಾಗದು. ನಮ್ಮಲ್ಲಿ ಮೇಧಾವಿಗಳಿಗೆ, ಬುದ್ಧಿವಂತರಿಗೆ ಕೊರತೆಯಿಲ್ಲ. ಅವರು ನಮಗೆ ಮಾರ್ಗದರ್ಶನ ನೀಡಲು ಶಕ್ತರಾಗಿದ್ದಾರೆ. ನಮ್ಮ ಕಾಲಿನ ಮೇಲೆ ನಾವು ನಿಲ್ಲಬೇಕು. ಕಂದಾಯ, ತೆರಿಗೆ ಕಡಿಮೆ ಮಾಡಿ ಎಂದು ಕೇಳಿಕೊಳ್ಳುವುದಕ್ಕೆ ಅಲ್ಲ ಕಾಂಗ್ರೆಸ್ ಹುಟ್ಟಿರುವುದು. ಜನತೆಯ ಕುಂದು ಕೊರತೆಗಳನ್ನು ಆಶೋತ್ತರಗಳನ್ನು ಗಮನಿಸಿ ತದನುಗುಣ ಸರ್ಕಾರ ವರ್ತಿಸಬೇಕು. ಈಗ ಈ ಸರ್ಕಾರ ತನ್ನ ಮನಬಂದಂತೆ ನಡೆದುಕೊಳ್ಳುತ್ತಿದೆ. ನಮ್ಮ ಜನ ತುಂಬ ಹಿಂದುಳಿದವರು. ಮುಂದುವರೆಯಲು ಅವರಿಗೆ ಸಾಕಷ್ಟು ಅವಕಾಶವಿಲ್ಲ. ಜವಾಬ್ದಾರಿ ಸರ್ಕಾರ ಸ್ಥಾಪಿತವಾದ ಮೇಲೆ ತಮ್ಮ ಪ್ರಗತಿಗೆ ಜನರಿಗೆ ಸದವಕಾಶ ದೊರೆಯಲಿ.

ಜವಾಬ್ದಾರಿ ಸರ್ಕಾರದ ಬೇಡಿಕೆಯನ್ನು ಸರ್ಕಾರದ ಮುಂದಿಟ್ಟರೆ ಫಲವೇನು? ಸರ್ಕಾರ ದಬ್ಬಾಳಿಕೆ, ಸಭೆ ಮೆರವಣಿಗೆ ಇವುಗಳ ನಿರ್ಬಂಧ, ಕಡೆಗೆ ಕಾಂಗ್ರೆಸ್ ಅಧ್ಯಕ್ಷ ಟಿ. ಸಿದ್ದಲಿಂಗಯ್ಯನವರ ಬಂಧನ, ಅವರ ಹಿಂದೆಯೇ ತನ್ನ ಬಂಧನ. ದಿವಾನರೇ ಸ್ವತಃ ಕಾಂಗ್ರೆಸ್ಸನ್ನು ಅಲ್ಲಗಳೆಯುತ್ತಿದ್ದಾರೆ, ದೂಷಿಸುತ್ತಿದ್ದಾರೆ. ಕೆಲವು ಸ್ಪರ್ಧಿಗಳು ತಮ್ಮ ಸ್ವಾರ್ಥ ಸಾಧಿಸಿಕೊಳ್ಳಲು ಇದೇ ಸಮಯವೆಂದು ಸರ್ಕಾರದೊಡನೆ ಸೇರಿಕೊಳ್ಳುತ್ತಿದ್ದಾರೆ. ಒಂದು ಕಡೆ ಚಹಾ ಕೂಟಗಳು,

ಭೋಜನ ಕೂಟಗಳು, ಇನ್ನೊಂದು ಕಡೆ ದಬ್ಬಾಳಿಕೆ, ನಾಯಕರು ಬಂಧನ. ಇದರಿಂದ ಜವಾಬ್ದಾರಿ ಸರ್ಕಾರದ ಅವಶ್ಯಕತೆ ಮತ್ತಷ್ಟು ಬಲವಾಗುತ್ತಿದೆ.

ರಾಜ್ಯಾಂಗ ಸುಧಾರಣಾ ಸಮಿತಿಯನ್ನು ಕೆ. ಆರ್. ಶ್ರೀನಿವಾಸ್ ಅಯ್ಯಂಗಾರ್ ಅವರ ಅಧ್ಯಕ್ಷತೆಯಲ್ಲಿ ನೇಮಿಸಲಾಗಿತ್ತು. ಈ ಸಮಿತಿಯ ಮುಂದೆ ಜವಾಬ್ದಾರಿ ಸರ್ಕಾರ ಕುರಿತು ನಿರ್ಣಯ ಮಂಡಿಸಲಾಗದು, ಮಾತನಾಡಲಾಗದು, ಎಂದು ನಿರ್ಬಂಧಿಸಿದರು. ಶ್ರೀನಿವಾಸ ಐಯ್ಯಂಗಾರರು ಕಾಂಗ್ರೆಸ್ಸಿನ ಪರ ಈ ಸಮಿತಿ ಸದಸ್ಯರಾಗಿ ಕಾರ್ಯ ನಿರ್ವಹಿಸಲು ಸರ್ಕಾರ ಅಸ್ಪದ ಕೊಡಲಿಲ್ಲ. ಇನ್ನು ಈ ಸಮಿತಿಯಲ್ಲಿ ಭಾಗವಹಿಸುವುದರಿಂದ ಆಗುವ ಪ್ರಯೋಜನವಾದರೂ ಏನು? ಆದ ಕಾರಣ ಈ ಸುಧಾರಣಾ ಸಮಿತಿಯ ನಿಲುವನ್ನು ಪ್ರತಿಭಟಿಸಲು ತಮ್ಮ ಸ್ಥಾನಗಳಿಗೆ ರಾಜೀನಾಮೆ ನೀಡಬೇಕೆಂದು ನ್ಯಾಯ ವಿಧಾಯಕ ಸಭೆಯ ಹಾಗೂ ಜಿಲ್ಲಾ ಬೋರ್ಡುಗಳ ಕಾಂಗ್ರೆಸ್ ಸದಸ್ಯರಿಗೂ ಸೂಚಿಸಲಾಗಿತ್ತು. ಅದರಂತೆ ನ್ಯಾಯ ವಿಧಾಯಕ ಸಭೆಯ ಕಾಂಗ್ರೆಸ್ ಸದಸ್ಯರು ತಮ್ಮ ಸ್ಥಾನಗಳಿಗೆ ವಿಧೇಯರಾಗಿ ರಾಜೀನಾಮೆ ಸಲ್ಲಿಸಿರುತ್ತಾರೆ. ಇವರು ವಂದನಾರ್ಹರು. ದಬ್ಬಾಳಿಕೆಯ ನೀತಿಯನ್ನು ಒಪ್ಪಿಕೊಳ್ಳುವ ಜನ, ಬರುವ ಚುನಾವಣೆಯಲ್ಲಿ ಕಾಂಗ್ರೆಸ್‌ಗೆ ತಮ್ಮ ಓಟು ಅಥವಾ ಮತ ನೀಡಬೇಕಾದ್ದಿಲ್ಲ. ಈಗ ರಾಜೀನಾಮೆ ಸಲ್ಲಿಸಿರುವವರು ಮುಂದಿನ ಚುನಾವಣೆಯಲ್ಲಿ ಕಾಂಗ್ರೆಸ್ ಉಮೇದುವಾರರಾಗಿ ಸ್ಪರ್ಧಿಸಲಿದ್ದಾರೆ. ಅವಿರೋಧವಾಗಿ ಅವರನ್ನು ಚುನಾಯಿಸಬೇಕೆಂದು ಸಭೆಗೆ ಭಾಷ್ಯಂ ವಿನಂತಿಸಿದರು.

ದಿವಾನ್ ಮಿರ್ಜಾ ಸಾಹೇಬರು ಮೈಸೂರು ಕಾಂಗ್ರೆಸ್ಸನ್ನು ಗಣನೆಗೆ ತೆಗೆದುಕೊಳ್ಳುತ್ತಿರಲಿಲ್ಲ. ಆದರೆ ಕಾಂಗ್ರೆಸ್ ಸಭೆಗಳಿಗೆ ಸಾವಿರಾರು ಸಂಖ್ಯೆಯಲ್ಲಿ ಜನ ಸೇರುವುದನ್ನು, ಎಲ್ಲೆಲ್ಲೂ ಬಿಳಿಯ ಟೋಪಿಗಳು ಕಣ್ಣಿಗೆ ಬೀಳುವುದನ್ನು ಗಮನಿಸಿ, ಮೈಸೂರು ಕಾಂಗ್ರೆಸ್ ಅಧ್ಯಕ್ಷ ಟಿ. ಸಿದ್ದಲಿಂಗಯ್ಯನವರನ್ನು ವಿಚಾರ ವಿನಿಮಯಕ್ಕೆ ಆಹ್ವಾನಿಸಿರುತ್ತಾರೆ. ಕಾಂಗ್ರೆಸ್ಸಿಗೆ ಇರುವ ಜನರ ಬೆಂಬಲವನ್ನು ಗಮನಿಸಿ ಸರ್ಕಾರವು ಭಯಗ್ರಸ್ತವಾಗಿದೆ. ಮೈಸೂರು ಕಾಂಗ್ರೆಸ್ಸನ್ನು ಪುರಸ್ಕರಿಸುವುದಿಲ್ಲ ಎನ್ನುತ್ತಿದ್ದವರು ಸಿದ್ದಲಿಂಗಯ್ಯನವರನ್ನು ಆಹ್ವಾನಿಸಿರುತ್ತಾರೆ. ಕುಸ್ತಿಯಲ್ಲಿ ಜಟ್ಟಿ ಕೆಳಗೆ ಬಿದ್ದರೂ ಮೀಸೆ ಮಣ್ಣಾಗಲಿಲ್ಲ, ತಾನು ಜಾರಿ ಬಿದ್ದೆ ಎಂದು ಹೇಳಿಕೊಳ್ಳುವಂತೆ ಸರ್ಕಾರ ವರ್ತಿಸುತ್ತಿದೆ. ನ್ಯಾಯ ವಿಧಾಯಕ ಸಭೆಯ ಕಾಂಗ್ರೆಸ್ ಸದಸ್ಯರು ಕಾಂಗ್ರೆಸ್ಸಿನ ಆದೇಶದಂತೆ ಶಿಸ್ತಿನ ಸಿಪಾಯಿಗಳಂತೆ ರಾಜೀನಾಮೆ ಸಲ್ಲಿಸಿ ಮರುಚುನಾವಣೆಗೆ ನಿಂತಾಗ ಅವರನ್ನು ಸೋಲಿಸಲು ಸರ್ಕಾರದವರು ವಿಶ್ವ ಪ್ರಯತ್ನ ಮಾಡಿದರು. ಬೆದರಿಕೆ ಹಾಕಿದರು. ಆದರೂ ಮತದಾರರು ಕಾಂಗ್ರೆಸ್ ಉಮೇದುವಾರರಿಗೆ ತಮ್ಮ ಓಟು ಕೊಟ್ಟು ಚುನಾಯಿಸಿರುತ್ತಾರೆ. ಇದು ಜನತೆಗೆ ಕಾಂಗ್ರೆಸ್ಸಿನಲ್ಲಿರುವ ವಿಶ್ವಾಸವನ್ನು ನಿದರ್ಶಿಸುತ್ತದೆ.

**೨) ದಿನಾಂಕ ೪.೪.೧೯೩೮ರಂದು ಬೆಂಗಳೂರು ಜಿಲ್ಲೆಯ ಹೊಸಕೋಟೆಯಲ್ಲಿ ಭಾಷ್ಯಂ ಮೈಸೂರು ಕಾಂಗ್ರೆಸ್ಸಿನ ಕಾರ್ಯಕರ್ತರನ್ನು ಉದ್ದೇಶಿಸಿ ಮಾಡಿದ ಭಾಷಣದ ಕೆಲವು ಮುಖ್ಯ ಅಂಶಗಳು:**

ನಾವು ಬಡವರು. ನಮ್ಮದು ಬಡದೇಶ. ಬಡತನದ ಜೊತೆಗೆ ನಾವು ಸರ್ಕಾರದ ಋಣಭಾರವನ್ನು ಹೋರಬೇಕಾಗಿದೆ. ಸಾಲಕ್ಕೆ ಸಲ್ಲಿಸಬೇಕಾದ ಬಡ್ಡಿಯನ್ನು ಸರ್ಕಾರ ಕೊಡುತ್ತಿಲ್ಲ.

ಇದಕ್ಕೆ ಪ್ರತಿಯಾಗಿ, ಬೆಟ್ಟಕ್ಕೆ ಹಾಸು ಹೊದಿಸಿದರು ಎಂಬ ಗಾದೆಯಂತೆ ಚಾಮುಂಡಿ ಬೆಟ್ಟವನ್ನು ದೀಪಗಳಿಂದ ಅಲಂಕರಿಸುತ್ತಿದ್ದಾರೆ. ಸಾಕಷ್ಟು ಶಾಲೆಗಳಿಲ್ಲ, ಆಸ್ಪತ್ರೆಗಳಿಲ್ಲ. ನಗರಗಳಲ್ಲಿ ಕಟ್ಟಡಗಳನ್ನು ಕಟ್ಟುತ್ತಿದ್ದಾರೆ. ಸರ್ಕಾರದ ವರಮಾನ ನಾಲ್ಕು ಕೋಟಿ. ಇಷ್ಟಾದರೂ ಗ್ರಾಮಾಂತರ ಪ್ರದೇಶಗಳಿಗೆ ಸರ್ಕಾರ ಯಾವ ಸೌಲಭ್ಯವನ್ನೂ ಒದಗಿಸುವುದಿಲ್ಲ. ಹಿಂದಿನ ಕಾಲದಲ್ಲಿ ನಮಗೆ ಅಗತ್ಯವಾದ ಬಟ್ಟೆಯನ್ನು ನಾವೇ ತಯಾರಿಸಿಕೊಳ್ಳುತ್ತಿದ್ದೆವು. ಈಗ ವಿದೇಶದಿಂದ ವಸ್ತ್ರ ಆಮದು ಮಾಡಿಕೊಳ್ಳುತ್ತಿದ್ದೇವೆ. ಇದರಿಂದ ವಿದೇಶಗಳಿಗೆ ಅಪಾರ ಹಣ ಹರಿದು ಹೋಗುತ್ತಿದೆ. ಜವಾಬ್ದಾರಿ ಸರ್ಕಾರ ಸ್ಥಾಪಿತವಾದಾಗ ಗ್ರಾಮಾಭಿವೃದ್ಧಿ ಕಾರ್ಯಗಳಿಗೆ; ಆಸ್ಪತ್ರೆ, ಶಾಲೆಗಳಿಗೆ ಹೆಚ್ಚು ಹಣ ಒದಗಿಸಲು ಸಾಧ್ಯವಾಗುತ್ತದೆ.

**೩) ದಿನಾಂಕ ೮-೮-೧೯೩೮ರಂದು ತುಮಕೂರು ಜಿಲ್ಲೆಯ ಮಧುಗಿರಿಯಲ್ಲಿ ಭಾಷ್ಯಂ ಮಾಡಿದ ಸಾರ್ವಜನಿಕ ಭಾಷಣದ ಪ್ರಮುಖ ಅಂಶಗಳು.**

ಜವಾಬ್ದಾರಿ ಸರ್ಕಾರದ ಬೇಡಿಕೆ ಬಹಳ ಕಾಲದಿಂದ ಇದೆ. ಜನ ಸರ್ಕಾರವನ್ನು ಕೇಳುತ್ತಲೇ ಇದ್ದಾರೆ. ಆದರೆ ಈಗಿರುವ ಒತ್ತಾಯದಂತೆ ಆಗ ಇರುತ್ತಿರಲಿಲ್ಲ. ಆಡಳಿತ ಸೂತ್ರವನ್ನು ಯಾರು ವಹಿಸಿಕೊಳ್ಳಬೇಕೆಂಬುದು ನಮ್ಮ ಮುಂದಿರುವ ಪ್ರಶ್ನೆ. ಸಾರ್ವಜನಿಕರ ಪ್ರತಿನಿಧಿಗಳೋ ಅಥವಾ ಅನ್ಯರೋ? ಜನ ಸುಖವಾಗಿದ್ದಾರೆಯೋ? ಅವರ ಅಗತ್ಯಗಳು ತೃಪ್ತಿಕರವಾಗಿ ಪೂರೈಕೆಯಾಗುತ್ತಿವೆಯೋ? ಸರಿಸುಮಾರು ಎಲ್ಲರೂ ಸಾಲಗಾರರೇ. ಹೇಗಪ್ಪ ದಿನಗಳನ್ನು ಕಳೆಯುವುದು ಎಂಬ ಚಿಂತೆ ಜನರಿಗೆ. ಈ ರೋಗಕ್ಕೆ ಔಷಧವೆಂದರೆ ಜನರ ಆದಾಯ ಹೆಚ್ಚಬೇಕು. ಈ ಸರ್ಕಾರ ಸ್ಥಳೀಯ ಕೈಗಾರಿಕೋದ್ಯಮಿಗಳಿಗೆ ಸಾಕಷ್ಟು ಪ್ರೋತ್ಸಾಹ ನೀಡುತ್ತಿಲ್ಲ. ಕೃಷಿಯು ಬೇಸಾಯಗಾರನ ಅಗತ್ಯಗಳನ್ನು ಪೂರೈಸುತ್ತಿಲ್ಲ. ಕೊರಟಗೆರೆ ತಾಲೂಕಿನ ತೋವಿನಕೆರೆ ಗ್ರಾಮದ ಕೈಬಳೆ ತಯಾರಿಸುವ ಉದ್ಯಮಕ್ಕೆ ಸಾಕಷ್ಟು ಪ್ರೋತ್ಸಾಹವಿಲ್ಲದೆ ನಶಿಸಿ ಹೋಗುತ್ತಿದೆ. ಈ ಬಗೆಯ ತೋವಿನಕೆರೆಗಳು ಮೈಸೂರು ಸಂಸ್ಥಾನದಲ್ಲಿ ಹಲವು ಇವೆ. ರೈತ ಸಾಲದ ಹೊರೆಯನ್ನು ಹೊರಬೇಕಾಗಿದೆ. ಆಡಳಿತ ಪ್ರಜೆಗಳ ಅಧೀನದಲ್ಲಿದ್ದದ್ದೇ ಆದರೆ ಆನೆ ದಂತ, ಚನ್ನಪಟ್ಟಣದ ಆಟಿಕೆಗಳು, ಬಳೆ ತಯಾರಿಕೆ ಮೊದಲಾದ ಉದ್ಯಮಗಳಿಗೆ ಪ್ರೋತ್ಸಾಹ ನೀಡುತ್ತಿತ್ತು. ಇದರಿಂದ ನಿರುದ್ಯೋಗ ಸಮಸ್ಯೆ ಸ್ವಲ್ಪಮಟ್ಟಿಗಾದರೂ ಕಡಿಮೆ ಆದೀತು. ಇಂದು ಜನರಿಗೆ ಆಡಳಿತದ ಮೇಲೆ ಯಾವ ಬಗೆಯ ಹತೋಟಿಯೂ ಇಲ್ಲ. ನಾಳೆಯ ದಿನ ದಿವಾನರೂ ಇಲ್ಲಿಗೆ ಆಗಮಿಸಲಿದ್ದಾರೆ. ಆದಕಾರಣ ಬೀದಿಗಳೆಲ್ಲವೂ ಚೊಕ್ಕಟವಾಗಿವೆ. ಚಪ್ಪರ ಹಾಕಿ ತಳಿರು-ತೋರಣ ಪತಾಕೆಗಳಿಂದ ಅಲಂಕರಿಸಿ, ದಿವಾನರಿಗೆ ಹಾರ ತುರಾಯಿ ಅರ್ಪಿಸಲಾಗುತ್ತದೆ. ಇದರಿಂದ ಪ್ರಜೆಗಳೆಲ್ಲ ಸುಖವಾಗಿದ್ದಾರೆಂದು ಅವರು ಭಾವಿಸುತ್ತಾರೆ. ನಿಜಕ್ಕೂ ನೀವು ಸುಖವಾಗಿದ್ದೀರಾ ಎಂದು ಪ್ರಶ್ನಿಸುತ್ತೇನೆ. ಮೆರವಣಿಗೆ ಕೇವಲ ಢಂಭಾಚಾರಣೆ, ತೋರಿಕೆ. ಎಲ್ಲಾ ಗಿಲೀಟು. ಮೇಲೆ ಗಿಲೀಟು, ಒಳಗೆಲ್ಲ ಟೊಳ್ಳು.

ಭೂಕಂದಾಯವನ್ನು ಕಡಿಮೆ ಮಾಡಿ ಎಂದು ಪ್ರತಿದಿನ ಬೊಬ್ಬೆ ಇಡುತ್ತಿದ್ದೇವೆ. ಆದರೆ ಕಿವುಡನ ಮುಂದೆ ಕಿನ್ನರಿ ಬಾರಿಸಿದಂತೆ ನಿಷ್ಪ್ರಯೋಜಕವಾಗುತ್ತಿದೆ. ರುಪಾಯಲ್ಲಿ ನಾಲ್ಕಾಣೆ ಕಂದಾಯ ಇಳಿಸಿ ಎಂದು ಬೇಡುತ್ತಿದ್ದೇವೆ. ನಾಲ್ಕಾಣೆ ಉಳಿತಾಯದಿಂದ ರೈತನಿಗೆ ಸ್ವಲ್ಪ ಮಟ್ಟಿಗಾದರೂ ಸಹಾಯವಾದೀತು. ಆದರೆ ಸರ್ಕಾರ ಹೇಳುತ್ತದೆ, ನಾಲ್ಕಾಣೆಯಷ್ಟು ಕಂದಾಯ

ಇಳಿಸುವುದರಿಂದ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳಷ್ಟು ನಷ್ಟವಾಗುತ್ತದೆ. ಆದಕಾರಣ ಕಡಿಮೆ ಮಾಡಲು ಸಾಧ್ಯವಿಲ್ಲ ಎನ್ನುವುದು ಸರ್ಕಾರದ ಅಭಿಪ್ರಾಯ. ಜವಾಬ್ದಾರಿ ಸರ್ಕಾರ ಇದ್ದುದೇ ಆದರೆ ಕಂದಾಯವನ್ನು ಕಡಿಮೆ ಮಾಡಬಹುದು.

ದಿವಾನರ ವೇತನ ತಿಂಗಳಿಗೆ ಐದು ಸಾವಿರ ರೂಪಾಯಿ. ಪ್ರಜಾಪ್ರತಿನಿಧಿ ಸಭೆಯಲ್ಲಿ ನಾವು ಕೇಳುತ್ತಲೇ ಇದ್ದೇವೆ, ಇದು ಸರಿಯೇ, ನ್ಯಾಯವೇ ಎಂದು. ದಿವಾನರು ತಾನು ಸಾರ್ವಜನಿಕರ ಸೇವಕ ಎಂದು ಹೇಳಿಕೊಳ್ಳುತ್ತಾರೆ. ಇವರು ಎಂಥ ಸೇವಕರು ಸ್ವಾಮಿ, ಸೇವಕನಿಗೆ ತಿಂಗಳಿಗೆ ೫೦೦೦ ರೂಪಾಯಿ, ಯಜಮಾನನಿಗೆ ಹೊಟ್ಟೆಯ ಮೇಲೆ ಒದ್ದೆಯ ಬಟ್ಟೆ.

ನಮ್ಮ ದೃಷ್ಟಿಯಲ್ಲಿರುವ ಜವಾಬ್ದಾರಿ ಸರ್ಕಾರ ಸ್ಥಾಪಿತವಾದರೆ ಸರ್ಕಾರಿ ನೌಕರನ ವೇತನವನ್ನು ಕಡಿಮೆ ಮಾಡಲು ಸಾಧ್ಯವಾದೀತು. ಇದರಿಂದ ತದನುಗುಣ ಕಂದಾಯವನ್ನು ಕಡಿಮೆ ಮಾಡಲು ಸಾಧ್ಯವಾದೀತು. ಜವಾಬ್ದಾರಿ ಸರ್ಕಾರ ಎಂದರೆ ಜನತೆಯ ಅಭೀಷ್ಟದಂತೆ ನಡೆದುಕೊಳ್ಳುವ ಸರ್ಕಾರ.

ಸರ್ಕಾರದ ಸಾಲ ೪೦ ಕೋಟಿ ರೂಪಾಯಿ. ನೂರರಲ್ಲಿ ೯೦ ಜನ ಕಾಲ ಈ ಸಾಲದ ಹೊರೆಯನ್ನು ವಹಿಸಿಕೊಳ್ಳಬೇಕಾಗಿದೆ. ಎಷ್ಟೇ ಕಷ್ಟ ಪಟ್ಟರೂ ಹೊಟ್ಟೆ ತುಂಬಿಕೊಳ್ಳುವುದೂ ಕೂಡ ಬಹುಜನರಿಗೆ ಸಾಧ್ಯವಾಗುತ್ತಿಲ್ಲ. ನಮ್ಮ ಹಿರಿಯರು 'ಸರ್ವೇ ಜನಾಃ ಸುಖಿನೋ ಭವಂತು' ಎಂದು ಪರಮಾತ್ಮನನ್ನು ಕುರಿತು ಪ್ರಾರ್ಥಿಸುತ್ತಾರೆ. ನಿಮ್ಮ ನಮ್ಮ ಕಷ್ಟಗಳನ್ನು ಜವಾಬ್ದಾರಿ ಸರ್ಕಾರದ ಸ್ಥಾಪನೆಯಿಂದ ಪರಿಹರಿಸಲು ಸಾಧ್ಯ.

ಮದ್ಯದ ವ್ಯಾಪಾರದಿಂದ ಹಣ ಸಂಪಾದಿಸುವುದನ್ನು ಕೈಬಿಡಬೇಕೆಂದು ಸರ್ಕಾರವನ್ನು ಮೇಲಿಂದ ಮೇಲೆ ನಾವು ಒತ್ತಾಯ ಮಾಡುತ್ತಿದ್ದೇವೆ. ಆದರೆ ಅವರದು ನಕಾರಾತ್ಮಕ ಉತ್ತರ, ಆಗುವುದಿಲ್ಲ ಎಂದು. ಪಾನ ನಿರೋಧ ಪ್ರಚಾರಕ್ಕಾಗಿ ಸಮಿತಿ ನೇಮಿಸುತ್ತಾರೆ. ಕಡೆಗೆ ಪ್ರಾಯೋಗಿಕವಾಗಿ ಚನ್ನಪಟ್ಟಣದಲ್ಲಿ ಷರಾಬು, ಸಾರಾಯಿ ಅಂಗಡಿಗಳನ್ನು ಮುಚ್ಚಿದ್ದಾರೆ. ಇದರಿಂದ ಏನು ಪ್ರಯೋಜನ? "ಕಾಗೆ ಓಡಿಸುವುದಕ್ಕೆ ತೋಟದ ಬಾಗಿಲು ಮುಚ್ಚಿದರಂತೆ!" ಆದರೆ ಅಲ್ಲಿನ ಕುಡುಕರು ಬೆಂಗಳೂರಿಗೆ ರೈಲಿನಲ್ಲಿ ಬಂದು ಕುಡಿದು ಹೋಗುತ್ತಾರೆ. ಚಪ್ಪರ, ತಳಿರು ತೋರಣ, ಜರತಾರಿ ಪೇಟ ಇವುಗಳಿಂದ ಏನು ಪ್ರಯೋಜನ? ಅವಿದ್ಯಾವಂತರ ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರ ಯಶಸ್ವಿಯಾಗದು. ವಿದ್ಯಾವಂತರಿರುವ ರಾಜ್ಯವಲ್ಲಿ ಜವಾಬ್ದಾರಿ ಸರ್ಕಾರ ಯಶಸ್ವಿಯಾಗಿ ಸಾಗುತ್ತಿದೆ. ಜಪಾನ್, ಜರ್ಮನಿ, ಅಮೇರಿಕ, ಜಕೋಸ್ಲೋವಾಕಿಯಾ ಈ ರಾಷ್ಟ್ರಗಳ ಜನ ವಿದ್ಯಾವಂತರು. ಆದಕಾರಣ ಈ ರಾಷ್ಟ್ರಗಳಲ್ಲಿ ಜವಾಬ್ದಾರಿ ಸರ್ಕಾರ ಯಶಸ್ವಿಯಾಗಿ ನಡೆಯುತ್ತಿದೆ. ಕೈಗಾರಿಕೋದ್ಯಮಗಳಿಗೆ ಈ ರಾಷ್ಟ್ರಗಳಲ್ಲಿ ಸರ್ಕಾರ ಪ್ರೋತ್ಸಾಹ ನೀಡುತ್ತಿದೆ. ಆದಕಾರಣ ಈ ರಾಷ್ಟ್ರಗಳ ಜನರು ಶ್ರೀಮಂತರೂ, ಸುಖಿಗಳೂ ಆಗಿದ್ದಾರೆ. ಪ್ರತಿಯೊಂದು ಹಳ್ಳಿಯಲ್ಲಿಯೂ ಮೂಲ ಶಿಕ್ಷಣ ಶಾಲೆಗಳು ಸ್ಥಾಪಿತವಾಗಬೇಕು. ಇಲ್ಲಿಯೂ ಕೈಗಾರಿಕೋದ್ಯಮಗಳಿಗೆ ಪ್ರೋತ್ಸಾಹ ನೀಡಿ ಎಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ನಾವು ನಿರ್ಣಯ ಮಂಡಿಸಿದರೆ, ಹಣ ಇಲ್ಲ ಎನ್ನುತ್ತದೆ ಸರ್ಕಾರ. ಆದರೆ ಬೆಟ್ಟವನ್ನು ದೀಪಗಳಿಂದ ಅಲಂಕರಿಸಲು ಸರ್ಕಾರಕ್ಕೆ ಹಣ ಇದೆ. ಇದು ಎಂಥ ಸರ್ಕಾರ?

ಮಿರ್ಜಾ ಸರ್ಕಾರದಲ್ಲಿ ಜನಾಭಿಪ್ರಾಯಕ್ಕೆ ಮನ್ನಣೆ ದೊರಕುತ್ತಿಲ್ಲ. ಜರತಾರಿ ಪೇಟ ಕಟ್ಟಿಕೊಂಡು, ತಮ್ಮ ಸೌಂದರ್ಯ ನೋಡಿ ಜನ ಮೆಚ್ಚಬೇಕೆಂಬ ಸರ್ಕಾರದ ಅಧಿಕಾರಿಗಳು! ಇದರಲ್ಲಿ ಸೌಂದರ್ಯವೇನಿದೆ! ಇದು ಕೇವಲ ಢಾಂಭಿಕ ಸೌಂದರ್ಯ. ಮರಗಳಲ್ಲಿ ಪುಷ್ಪಗಳು ಅರಳಿ ತಮ್ಮ ಸೌರಭ ಸುಗಂಧಗಳಿಂದ ಸಹಜವಾಗಿ ಹರ್ಷ ನೀಡುತ್ತದೆ. ಇದು ಪುಷ್ಪದ ಸಹಜ ಗುಣ. ನಾರಿಯರು ಈ ಪುಷ್ಪಗಳನ್ನು ಶಿರದಲ್ಲಿ ಧರಿಸಿ ಹೆಮ್ಮೆಯಿಂದ ಬೀಗುತ್ತಾರೆ. ದೇವರಿಗೆ ಅರ್ಪಿಸಿ ಹರ್ಷಿಸುತ್ತಾರೆ. ಪುಷ್ಪಗಳು ಅರಳಿ ಎಲ್ಲರಿಗೂ ಹರ್ಷ ತರಲು ಮಿರ್ಜಾ ಸಾಹೇಬರ ಅಪ್ಪಣೆ ಏನೂ ಬೇಡವಷ್ಟೇ? ಆದರೆ ಜನರ ಆದಾಯವನ್ನು ಹೆಚ್ಚಿಸಿ, ಅವರ ಕೊಳ್ಳುವ ಸಾಮರ್ಥ್ಯ ಅಧಿಕಗೊಳಿಸುವುದು ಸರ್ಕಾರದ ಕರ್ತವ್ಯ. ಈ ಕರ್ತವ್ಯವನ್ನು ಮಿರ್ಜಾ ಸರ್ಕಾರ ಎಷ್ಟರ ಮಟ್ಟಿಗೆ ಸಾಧಿಸಿದೆ ಇದು ನಿಮ್ಮ ಮುಂದಿರುವ ಪ್ರಶ್ನೆ. ಜನರ ಅಭಿಮತಕ್ಕೆ ಮನ್ನಣೆ ದೊರೆಯುತ್ತಿಲ್ಲ. ದಿವಾನರು ಮತ್ತು ಇಬ್ಬರು ಕೌನ್ಸಿಲರು ಸರ್ಕಾರದ ಆದಾಯವನ್ನು ತಮ್ಮ ಮನಬಂದಂತೆ ಹಂಚುತ್ತಾರೆ. ನಿಮ್ಮ ಪ್ರತಿನಿಧಿಗಳಾದ ನಮಗೆ, ನಮ್ಮ ಅಭಿಪ್ರಾಯಗಳಿಗೆ, ಬೇಡಿಕೆಗಳಿಗೆ ಮನ್ನಣೆ ಇಲ್ಲ. ನಮ್ಮದು ಅರಣ್ಯ ರೋದನವಾಗಿದೆ. ಜವಾಬ್ದಾರಿ ಸರ್ಕಾರದಲ್ಲಿ ಕೌನ್ಸಿಲರುಗಳು ತಮ್ಮ ಮನಬಂದಂತೆ ವರ್ತಿಸುತ್ತಾ ಜನಾಭಿಪ್ರಾಯಕ್ಕೆ ಮನ್ನಣೆ ಕೊಡದ ಪಕ್ಷದಲ್ಲಿ ತಮ್ಮ ಸ್ಥಾನಗಳನ್ನು ಕಳೆದುಕೊಳ್ಳುತ್ತಿದ್ದರು.

ನೆರೆಯ ಮದರಾಸಿನಲ್ಲಿ ಕಾಂಗ್ರೆಸ್ ಅಧಿಕಾರ ಸೂತ್ರ ವಹಿಸಿಕೊಂಡಿದೆ. ಅಲ್ಲಿ ಒಂದು ಜವಾಬ್ದಾರಿ ಸರ್ಕಾರ ಸ್ಥಾಪಿತವಾಗಿದೆ. ಒಂದೇ ವರ್ಷದಲ್ಲಿ ಈ ಸರ್ಕಾರ ಹಲವು ಜನಪ್ರಿಯ ಕಾರ್ಯಗಳನ್ನು 'ಪ್ರಧಾನಿ' ಸಿ. ರಾಜಗೋಪಾಲಾಚಾರ್ಯರವರ ನೇತೃತ್ವದಲ್ಲಿ ಸಾಧಿಸಿದೆ. ಆದ ಕಾರಣ ಬಡ ಜನರು ಅವರನ್ನು ದೇವಮಾನವನಂತೆ ಗೌರವಿಸುತ್ತಾರೆ. ಕಳೆದ ವರ್ಷ ಸೇಲಂ ಜಿಲ್ಲೆಯನ್ನು ಅವರು ಸಂಪೂರ್ಣ ಪಾನ ನಿಷೇಧ ಜಾರಿಯ ಒಳಗೆ ತಂದಿರುತ್ತಾರೆ. ಇದರಿಂದ ಸರ್ಕಾರಕ್ಕೆ ಆಗುವ ನಷ್ಟ ೨೯ ಲಕ್ಷ ರೂಪಾಯಿಗಳು. ಪಾನ ನಿಷೇಧ ಜಾರಿಗೆ ತರುವವರೆಗೆ ಕುಡುಕರ ಮನೆಗಳು ನರಕ ಕೂಪಗಳಾಗಿದ್ದರು. ಹೆಂಗಸರು, ಮಕ್ಕಳು ಭೀತಿಯಿಂದ ತತ್ತರಿಸುತ್ತಿದ್ದರು. ಈಗ ಈ ಮನೆಗಳಲ್ಲಿ ಸುಖ ಶಾಂತಿ ನೆಲೆಸಿದೆ. ಒಂದು ವರದಿಯಂತೆ ಪಾನಕ್ಕೆ ವೆಚ್ಚ ಮಾಡುತ್ತಿದ್ದ ಹಣದಿಂದ ಅಲ್ಯುಮೀನಿಯಂ ಪಾತ್ರೆಗಳನ್ನು, ಮಕ್ಕಳಿಗೆ ಸ್ಲೇಟು ಪುಸ್ತಕಗಳನ್ನು, ಸೀರೆ ಕುಪ್ಪಸಗಳನ್ನು ಖರೀದಿಸಿ ಸುಖದಿಂದ ಬಾಳುತ್ತಿದ್ದಾರೆ. ಈಗ ಪಾನ ನಿಷೇಧವನ್ನು ಕಡಪ್ಪ ಮತ್ತು ಚಿತ್ತೂರು ಜಿಲ್ಲೆಗಳಲ್ಲೂ ಜಾರಿಗೆ ತರಲಾಗುತ್ತಿದೆ.

ಈಚೆಗೆ ಮಿಲ್ ಮಾಲೀಕರಿಗೂ, ಶ್ರಮಜೀವಿಗಳಿಗೂ ವ್ಯಾಜ್ಯ ತಲೆದೋರಿತ್ತು. ಸರ್ಕಾರ ಶ್ರಮಜೀವಿಗಳ ಪರ ತೀರ್ಮಾನ ತೆಗೆದುಕೊಂಡಿತು. ಸಾಲ ನಿವಾರಣೆ ಶಾಸನ ಅಲ್ಲಿ ಜಾರಿಗೆ ಬಂದಿದೆ. ಇದರಿಂದ ಸಾಲಗಾರರಿಗೆ ಬಹಳಷ್ಟು ಅನುಕೂಲವಾಗಿದೆ. ಇದೆಲ್ಲ ಸಾಧ್ಯವಾಗಿರುವುದು ಜವಾಬ್ದಾರಿ ಸರ್ಕಾರದ ದೆಸೆಯಿಂದ ಇಲ್ಲಿಯೂ ಈ ಕೂಡಲೇ ಜವಾಬ್ದಾರಿ ಸರ್ಕಾರ ಸ್ಥಾಪಿತವಾಗಬೇಕೆಂಬುದು ನಮ್ಮ ಕೋರಿಕೆ.

**ಳ) (ಗಾಂಧೀಜಿಯವರಲ್ಲಿ ಭಾಷ್ಯಂ ಅವರಿಗೆ ಅಪರಿಮಿತ ಭಕ್ತಿ ಹಾಗೂ ಶ್ರದ್ಧೆ. ಅವರು ಗಾಂಧೀಜಿಯವರನ್ನು ಮಹಾವಿಷ್ಣುವಿನ ಅವತಾರವೆಂದೇ ಭಾವಿಸಿದ್ದರಷ್ಟೇ ಅಲ್ಲ, ಮಹಾತ್ಮರ ಮಾತುಗಳನ್ನು ವೇದವಾಕ್ಯಕ್ಕೆ ಸಮವೆಂದು ಪರಿಗಣಿಸಿದ್ದರು. ದಿನಾಂಕ ೨೮-೯-೧೯೩೮ರಂದು**

ಮೈಸೂರು ಜಿಲ್ಲಾ ಕಾಂಗ್ರೆಸ್ ಕಾರ್ಯಕಾರಿಣಿಯ ಆಶ್ರಯದಲ್ಲಿ ಮೈಸೂರಿನ ರಂಗಾಚಾರ್ಯ ಸ್ಮಾರಕ ಭವನದಲ್ಲಿ ಮಾತನಾಡುತ್ತಾ ಭಾಷ್ಯಂ ಈ ಕೆಳಗಿನಂತೆ ಹೇಳಿದ್ದನ್ನು ದಾಖಲಿಸಲಾಗಿದೆ.)

ಮುನಿಸ್ವಾಮಿ ಪಿಳ್ಳೆ ಅವರು ಮಹಾತ್ಮರನ್ನು ಪರಮಾತ್ಮನ ಶ್ರೇಷ್ಠ ಅವತಾರ ಎಂದು ಹೊಗಳಿರುತ್ತಾರೆ. ಇದರಲ್ಲಿ ಉತ್ಪ್ರೇಕ್ಷೆಯಿಲ್ಲ. ಮಹಾತ್ಮರನ್ನು ಕೊಂಡಾಡದ ವ್ಯಕ್ತಿ ಇಲ್ಲ. ಅವರನ್ನು ದೂಷಿಸುವ ಮಾನವ ಯಾರೂ ಇಲ್ಲ ಎಂದರೆ ಅದು ಅತಿಶಯೋಕ್ತಿ ಆಗದು. ಕ್ರೈಸ್ತ ಪಾದ್ರಿಗಳು, ಅವರ ಗುರು ಪೋಪ್, ಆಚಾರ್ಯರು ಮಹಾತ್ಮರನ್ನು ದೇವರಂತೆ ಪೂಜಿಸುತ್ತಾರೆ. ಮಹಾತ್ಮಾ ಗಾಂಧಿ ಅವರು ಈ ಮಾತೃ ಭೂಮಿಯಲ್ಲಿ ಜನ್ಮ ತಾಳಿದ್ದು ನಮ್ಮ ಸುಕೃತ. ಅವರು ಈ ಕಾರಣದಿಂದ ನಮ್ಮ ಭ್ರಾತೃಗಳಲ್ಲಿ ಒಬ್ಬರು. ಈ ಕಾಲದಲ್ಲಿ ನಾವು ಬದುಕಿರುವುದು ನಮ್ಮ ಪುಣ್ಯ. ಇಂದು ಆ ಅವತಾರ ಪುರುಷನ ಜನ್ಮ ದಿನವನ್ನು ನಾವು ಆಚರಿಸುತ್ತಿರುವುದು ನಮ್ಮ ಅದೃಷ್ಟ. ಪುರಾತನ ಯುಗದಲ್ಲಿ ಅಯೋಧ್ಯೆಯ ಜನ ಶ್ರೀರಾಮನ ಕಾಲದಲ್ಲಿ ಅವನೊಡನೆ ಬಾಳಿ ಬದುಕಿದ್ದು ಅವರ ಪುಣ್ಯ. ನಾವು ಅಯೋಧ್ಯೆಯ ಪುರ ನಿವಾಸಿಗಳೆಂದೂ, ಮಹಾತ್ಮರು ಶ್ರೀರಾಮನೆಂದೂ ಕಲ್ಪಿಸಿಕೊಳ್ಳಬೇಕು. ಅವರ ತತ್ವಗಳನ್ನು ಪ್ರತಿದಿನ ಆಚರಣೆಗೆ ತಂದುದೇ ಆದರೆ ಈ ನಾಡು ಭೂಮಿ ಸ್ವರ್ಗವೇ ಆದೀತು. ಮಹಾತ್ಮರು ಶ್ರೀರಾಮನಿಗಿಂತ ದೊಡ್ಡವರು ಎಂದರೂ ತಪ್ಪಾಗದು. ಶ್ರೀರಾಮ ರಾಕ್ಷಸರ ನಾಶಕ್ಕೆ ಕೋದಂಡವನ್ನು ಬಳಸಿಕೊಂಡು ಕೋದಂಡಪಾಣಿ ಎನಿಸಿಕೊಂಡ. ರಾವಣನ ವಧೆಗೆ ಕೋದಂಡವನ್ನು ಬಳಸಿಕೊಂಡ. ಆದರೆ ಮಹಾತ್ಮಾಜಿ ಆತ್ಮ ಬಲದಿಂದ ಜಯಸಾಧಿಸುತ್ತಿದ್ದಾರೆ. ಅವರ ಪ್ರಭಾವದಿಂದ ಈ ಪ್ರಪಂಚದಲ್ಲಿ ಸತ್ಯವು ದಿನದಿನಕ್ಕೂ ವೃದ್ಧಿಸುತ್ತಿದೆ. ಸತ್ಯ ನುಡಿಯುವುದರಲ್ಲಿ ನಮ್ಮಲ್ಲಿ ಅನೇಕರು ಅವರ ಹಿಂಬಾಲಕರಾಗಿದ್ದಾರೆ. ಬಹಳ ಕಾಲದ ಹಿಂದೆ ಈ ಭೂಮಿಯಲ್ಲಿ ಒಬ್ಬನೇ ಒಬ್ಬ ಪ್ರಹ್ಲಾದನಿದ್ದ. ಇಂದು ಗಾಂಧೀಜಿ ನಮ್ಮೆಲ್ಲರನ್ನೂ ಪ್ರಹ್ಲಾದರಾಗಿ ಪರಿವರ್ತಿಸಿದ್ದಾರೆ. ಲಾಠಿ ಪೆಟ್ಟಿಗಾಗಲೀ ಗೋಲಿ ಬಾರಿಗಾಗಲೀ ನಾವು ಹೆದರುವುದಿಲ್ಲ. ದೊರೆಯನ್ನು ಕಾಣಲು ನಾವು ಅಪಾರ ಹಣ ವೆಚ್ಚಮಾಡಬೇಕಾಗುತ್ತದೆ. ಆದರೆ ಮಹಾತ್ಮರನ್ನು ಸಂದರ್ಶಿಸಲು ಅಗತ್ಯವಾದದು. ಒಂದಿಷ್ಟು ಹೂವು ಮತ್ತು ಹಣ್ಣು. ಅವರನ್ನು ನೋಡಲು ಹೋಗುವಾಗ ಭಗವಂತನನ್ನೇ ನೋಡಲು ಹೋಗುತ್ತಿದ್ದೇವೆ ಎನಿಸುತ್ತದೆ. ನಾವು ಅವರ ಸಾಮಿಪ್ಯಕ್ಕೆ ಹೋದಾಗ ಅವರು ಕೇಳುವುದಾದರೂ ಏನು? 'ಖಾದಿ ಧರಿಸಿ, ಬೇರೆ ಯಾವ ವಸ್ತ್ರವನ್ನೂ ತೊಡಬೇಡಿ.' ಇಷ್ಟು ಸುಲಭದ ಕೆಲಸ ನಾವು ಮಾಡದಿದ್ದರೆ ಈ ಪ್ರಪಂಚದಲ್ಲಿರುವ ಯೋಗ್ಯರೆ?

ಮಹಾತ್ಮರು ಸಂಪೂರ್ಣ ಪಾನನಿಷೇಧ ಜಾರಿಗೆ ತರಬೇಕೆಂದು ಹೇಳುತ್ತಿದ್ದಾರೆ. ಕುಡುಕರು ಮತ್ತು ಅವರ ಕುಟುಂಬಗಳು ಅನುಭವಿಸುವ ಕಷ್ಟ ಸಂಕಟಗಳನ್ನು ಅವರು ಸ್ವತಃ ಕಂಡಿದ್ದಾರೆ. ಹರಿಜನರ ಉದ್ಧಾರ ಬಹುಮಟ್ಟಿಗೆ ಅವರ ಪ್ರಯತ್ನದಿಂದಲೇ ಆಗಿರುವುದು. ಅವನು ಉನ್ನತ ಮಟ್ಟದ ಹಿಂದೂ ಆಗಲಿ ಹರಿಜನನಾಗಲಿ ಭೇದ ಅವರರಿಯರು.

ಇನ್ನು ವಿದ್ಯಾರ್ಥಿಗಳಿಗೆ ಒಂದೆರಡು ಹಿತನುಡಿ ನುಡಿಯಲು ಬಯಸುತ್ತೇನೆ. ತಾಳ್ಮೆಗೆಡಬೇಡಿ. ಕೋಪದಿಂದ ಎಂದೂ ಮಾತನಾಡಬೇಡಿ. ಯಾವಾಗಲೂ ಹರ್ಷಚಿತ್ತರಾಗಿರಿ. ಸತ್ಯ ನುಡಿಯಲು ಅಧೈರ್ಯಪಡಬೇಡಿ. ಯಾರ ಮನಸ್ಸನ್ನೂ ವೃಥಾ ನೋಯಿಸಬೇಡಿ. ಮಹಾತ್ಮರ ಕಾಲದಲ್ಲೇ ನಾವು ಬದುಕಿರುವುದರಿಂದ ಅವರ ಮಹಿಮೆಯನ್ನು ಅರಿತುಕೊಳ್ಳಲು ನಮಗೆ

ಸಾಧ್ಯವಾಗುತ್ತಿಲ್ಲ. ನೀವೆಲ್ಲ ಏಸು ಸ್ವಾಮಿ ಮತ್ತು ಮಹಮ್ಮದ್ ಪೈಗಂಬರರ ಜೀವನ ಚರಿತ್ರೆಯನ್ನು ಬಲ್ಲಿರಿ. ಅಂತೆಯೇ ಮುಸಲೋನಿ ಮತ್ತು ಹಿಟ್ಲರ್ ಅವರ 'ದೊಡ್ಡತನ'ವನ್ನೂ ಬಲ್ಲಿರಿ. ಭಾರತೀಯನು ವಿದೇಶಗಳಿಗೆ ಹೋದರೆ ಅವನನ್ನು ಅಲ್ಲಿಯ ಜನ ಗೌರವದಿಂದ ಸ್ವಾಗತಿಸುತ್ತಾರೆ. ಅವನು ಮಹಾತ್ಮಾ ಅವರ ನಾಡಿನಿಂದ ಬಂದವನೆಂದು ಆದರಿಸುತ್ತಾರೆ. ಆದರೆ ಒಬ್ಬ ಜರ್ಮನ್ ದೇಶದವನು ರಷ್ಯಾಕ್ಕೆ ಹೋದರೆ ಅವನನ್ನು ಕೋಪದಿಂದ ದುರುಗುಟ್ಟಿ ದೃಷ್ಟಿಸುತ್ತಾರೆ. ಅವನ ಸ್ವಾತಂತ್ರ್ಯಕ್ಕೂ ಕೂಡ ಧಕ್ಕೆ ಬಂದೀತು.

ಮುಸಲೋನಿ ಮತ್ತು ಹಿಟ್ಲರ್ ತುಂಬ ಶಕ್ತಿಶಾಲಿಗಳೆಂದು ನೀವು ಬಲ್ಲಿರಿ. ಈ ಪ್ರಪಂಚವನ್ನು ತಮ್ಮ ಅಡಿಯಾಳಾಗಿ ಮಾಡಿಕೊಳ್ಳಬೇಕೆಂದು ಹವಣಿಸುತ್ತಿದ್ದಾರೆ. ಇಬ್ಬರು ಏಕ ಕಾಲದಲ್ಲಿ ಈ ಭೂಮಿಯ ನಾಯಕರಾಗಲಾರರು. ಇವರಲ್ಲಿ ಒಬ್ಬರು ಮಾತ್ರ ನಾಯಕರಾಗಬಲ್ಲರು. ಇಬ್ಬರಲ್ಲಿ ಒಬ್ಬರು ಸಾಯಬೇಕು ಅಥವಾ ಇನ್ನೊಬ್ಬನ ಅಡಿಯಾಳಾಗಬೇಕು. ಯಾರೊಬ್ಬರೂ ಈ ವಿಶ್ವವನ್ನು ತಮ್ಮ ಅಡಿಯಾಳಾಗಿ ಮಾಡಿಕೊಳ್ಳಲಾರರು. ಉಳಿದವರು ಅಪಮೃತ್ಯುವಿಗೆ ಆಹ್ವಾನವಾದಾನು. ಮಹಾತ್ಮರ ಸಿದ್ಧಾಂತಗಳು ಇಡೀ ವಿಶ್ವಕ್ಕೇ ಚಿರಶಾಂತಿ ಮತ್ತು ನೆಮ್ಮದಿ ನೀಡಬಲ್ಲವು. ಮಹಾತ್ಮರು ಸಾಕ್ಷಾತ್ ಪರಮಾತ್ಮನ ಅವತಾರ ಪುರುಷರು. ನಾವು ಅವರ ಅನುಯಾಯಿಗಳು. ದೇವರ ಇತರ ಅವತಾರಗಳನ್ನು ಪೂಜಿಸುವಂತೆ ನಾವು ಮಹಾತ್ಮರನ್ನು ಪೂಜಿಸುವವರಾಗಬೇಕು. ನೀವು ಸ್ವಾರ್ಥತ್ಯಾಗಿಗಳಾಗಿ ಈ ದೇಶಕ್ಕೆ ನಿಮ್ಮ ಶಕ್ತಿ ಮೀರಿ ಸೇವೆ ಸಲ್ಲಿಸಬೇಕು. ತಾಳ್ಮೆಯಿಂದ ನನ್ನ ಭಾಷಣವನ್ನು ಕೇಳಿದ್ದಕ್ಕಾಗಿ ಅಧ್ಯಕ್ಷರಿಗೂ ತಮಗೂ ನನ್ನ ವಂದನೆಗಳು.

ಖ) (ದಿನಾಂಕ ೩೦.೧೨.೧೯೩೯ ರಂದು ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ **ಸದಸ್ಯರಾಗಿ ಕೆ. ಟಿ. ಭಾಷ್ಯಂ ಮತ್ತು ಎಂ. ಗೋವಿಂದ ರೆಡ್ಡಿಯವರು ಚಿತ್ರದುರ್ಗದ ಮೊದಲ ದರ್ಜೆ ನ್ಯಾಯಾಧೀಶರ ಮುಂದೆ ನೀಡಿದ ಹೇಳಿಕೆ. ಈ ಹೇಳಿಕೆಯು ಭಾಷ್ಯಂ ಅವರ ನ್ಯಾಯಸಮ್ಮತ ದೃಷ್ಟಿಕೋನ, ನಿರ್ಭಯ ಮನಸ್ಸು ಹಾಗೂ ತಾರ್ಕಿಕ ಸೂಕ್ಷ್ಮತೆಗಳ ಬಹಳ ಉತ್ತಮ ಉದಾಹರಣೆಯಾಗಿದೆ.)**

ಉದ್ದೇಶಿಸಿರುವ ರಾಜಕೀಯ ಸುಧಾರಣಾ ಸಮಿತಿಯ ಬಗ್ಗೆ ಜನರನ್ನು ಜಾಗ್ರತಗೊಳಿಸುವ ಉದ್ದೇಶದಿಂದ ನಾವು ಪ್ರವಾಸ ಕೈಗೊಂಡಿದ್ದೇವೆ. ಉದ್ದೇಶಿಸಿರುವ ಸುಧಾರಣೆಗಳು ನಿರುಪಯುಕ್ತ ಮಾತ್ರವಲ್ಲದೆ ಹಾನಿಕಾರಕವೂ ಆಗಿವೆ. ಈ ರೀತಿ ಪ್ರಚಾರ ಮಾಡುವುದು ನಮ್ಮ ಹಕ್ಕನ್ನೊಳಗೆ. ಜವಾಬ್ದಾರಿ ಸರ್ಕಾರ ಬೇಡುವಂತೆಯೂ, ಮತ್ತು ಹೀಗೆ ಬೇಡುವಾಗ ಸಂಭವಿಸಬಹುದಾದ ಎಲ್ಲ ಕಷ್ಟ ನಷ್ಟ ಸಂಕಟಗಳಿಗೂ ಸಿದ್ಧವಾಗಿರುವಂತೆಯೂ ಜನರಿಗೆ ಹೇಳುತ್ತಿದ್ದೇವೆ. ಇದು ಅಪರಾಧವೂ ಅಲ್ಲ, ಬುಡಮೇಲು ಮಾಡುವ ಪ್ರಯತ್ನವೂ ಅಲ್ಲ.

ನಾವು ಅತೃಪ್ತಿ ಹಾಗೂ ಅಸಮಾಧಾನವನ್ನುಂಟುಮಾಡುತ್ತಿದ್ದೇವೆ ಎನ್ನಲಾಗಿದೆ. ಇದು ಅನ್ಯಾಯ. ನಾವು ಅವುಗಳನ್ನು ಸೃಜಿಸುತ್ತಿಲ್ಲ. ಅವು ಪೂರ್ವಭಾವಿಯಾಗಿ ಇದ್ದೇ ಇವೆ. ಮುಂದೆ ಇನ್ನೂ ಹೆಚ್ಚಿನ ಸತ್ಯ ಹಾಗು ಸಹಾನುಭೂತಿಯ ಸರ್ಕಾರ ಸ್ಥಾಪಿತವಾಗುವವರೆಗೂ ಇದ್ದೇ ಇರುತ್ತವೆ. ಇಲ್ಲಿನ ವಾತಾವರಣ ಗಂಭೀರವಾಗಿದೆ. ನಮ್ಮ ಭಾಷಣಗಳಿಂದ ಅಶಾಂತಿ ತಲೆದೋರಬಹುದೆಂದು ಹೇಳಲಾಗುತ್ತಿದೆ. ಇದು ಅಸತ್ಯ, ಶುದ್ಧ ಸುಳ್ಳು. ತುಮಕೂರು, ಬೆಂಗಳೂರುಗಳಲ್ಲಿರುವ ಜನರಂತೆಯೇ ಚಿತ್ರದುರ್ಗದ ಜನರ ಸ್ವಭಾವ. ಅದೇ ವಾತಾವರಣ. ಈ ಜಿಲ್ಲೆಗಳಲ್ಲಿ ಎಂಟಕ್ಕೂ

ಹೆಚ್ಚು ಬಹಿರಂಗ ಸಭೆಗಳಲ್ಲಿ ನಾವು ಮಾತನಾಡಿದ್ದೇವೆ. ಆದರೆ ಅಲ್ಲಿ ಯಾವ ಶಾಂತಿಭಂಗವೂ ಆಗಿಲ್ಲ ಏನೂ ಆಗಿಲ್ಲ.

ಇತರ ಕಡೆಗಳಲ್ಲಿ ಆದಂತೆಯೇ ಇಲ್ಲಿಯಾದರೂ ಅಶಾಂತಿ ಹೇಗೆ ನೆಲೆಸೀತು? ನಮ್ಮ ಭಾಷಣಗಳಿಂದ ನೆಮ್ಮದಿ ಹೇಗೆ ಕೆಟ್ಟೀತೂ? ನಮ್ಮ ಭಾಷಣಗಳು ಅಕ್ರಮವಾದವುಗಳಲ್ಲ. ಅವು ಸರ್ಕಾರವನ್ನು ಉರುಳಿಸುವ ಉದ್ದೇಶವನ್ನೂ ಹೊಂದಿಲ್ಲ ಜವಾಬ್ದಾರಿ ಸರ್ಕಾರದ ಪರ ಜನಾಭಿಪ್ರಾಯ ಯಾವರೀತಿಯಲ್ಲಿದೆ ಎಂಬುದನ್ನು ಸರ್ಕಾರಕ್ಕೆ ಮನದಟ್ಟು ಮಾಡಿಕೊಡುವುದು ನಮ್ಮ ಭಾಷಣಗಳ ಉದ್ದೇಶ.

ನಮ್ಮನ್ನು ಸೆರೆಮನೆಗೆ ಸೇರಿಸುವುದು ಅಥವಾ ಯಾರಾದರೂ ನಮಗೆ 'ಷೂರಿಟಿ' ಜಾಮೀನು ಕೊಡುವಂತೆ ಮಾಡುವುದು, ಹಾಗೂ ಈ ಕ್ರಮಗಳಿಂದ ನಮ್ಮ ಬಾಯಿ ಮುಚ್ಚಿಸುವುದು ಸರ್ಕಾರದ ಉದ್ದೇಶವೆನ್ನುವುದು ಸ್ಪಷ್ಟವಾಗಿದೆ. ಜಾಮೀನು ಒದಗಿಸುವುದಕ್ಕಿಂತ ಸೆರೆಮನೆ ಸೇರುವುದು ಉಚಿತವೆಂದು ನಮಗೆ ಅನಿಸುತ್ತದೆ. ನಾವು ಜಾಮೀನು ಕೊಡಲು ನಿರಾಕರಿಸುತ್ತೇವೆ. ನಮ್ಮ ನ್ಯಾಯವಾದ ಪ್ರಜಾಧಿಕಾರವನ್ನು ಅಪಹರಿಸುವ ನಿಮ್ಮ ಅಕ್ರಮ ಕ್ರಮವನ್ನು ವಿರೋಧಿಸುವುದೊಂದೇ ನಮಗೆ ಉಳಿದಿರುವ ಗೌರವಾನ್ವಿತ ಮಾರ್ಗ.

**೬) (ಮೈಸೂರು ಕಾಂಗ್ರೆಸ್ಸಿನ ಮೂರನೆಯ ಅಧಿವೇಶನದಲ್ಲಿ ಭಾಷ್ಯಂ ದಿನಾಂಕ ೧೦-೪-೧೯೪೦ ರಂದು ಶಿವಮೊಗ್ಗಾದಲ್ಲಿ ಮಾಡಿದ ಭಾಷಣದ ಮಹತ್ವದ ಅಂಶಗಳನ್ನು ವಾಚಕರೆದುರಿಗೆ ತೆರೆದಿಡಲಾಗುತ್ತಿದೆ. ಈ ಭಾಷಣವು ಕರ್ನಾಟಕ ರಾಜ್ಯದ ಭವಿಷ್ಯದ ಅಭಿವೃದ್ಧಿ ಹಾಗೂ ದೇಶದ ರಾಜಕೀಯ ಬೆಳವಣಿಗೆಗಳ ದೃಷ್ಟಿಯಿಂದ ಅನೇಕ ಮಹತ್ವದ ಅಂಶಗಳನ್ನು ನೀಡುವ ಪ್ರಯತ್ನವಾಗಿದೆ.**

ವಿರುಧಾನಗರದ ಅಧಿವೇಶನ ಮುಂಬರಲಿರುವ ಕಾರ್ಮೋಡಗಳ ದಿನಗಳನ್ನು ಸೂಚಿಸಿದೆ. ಮೇ ೧೯೩೮ರಲ್ಲಿ ಆದ ಒಪ್ಪಂದ ಛಿದ್ರ ಛಿದ್ರವಾಗಿದೆ. ಗಡೀಪಾರು ಆಜ್ಞೆಗಳನ್ನು ಹಿಂತೆಗೆದುಕೊಂಡಿರುವುದಿಲ್ಲ. ಮೈಸೂರು ನಗರಕ್ಕೆ ಅನ್ವಯಿಸಲಾಗಿದ್ದ ನಿರ್ಬಂಧಾಜ್ಞೆಗಳನ್ನು ಮತ್ತೆ ಪುನರುಜ್ಜೀವಿತಗೊಳಿಸಲಾಗಿದೆ; ಕಾಂಗ್ರೆಸ್ಸಿಗೆ ಸ್ನೇಹಪರರಾಗಿದ್ದರೆಂಬ ನೆಪದಿಂದ ಪಟೇಲ್ ಶಾನುಭೋಗರನ್ನು ವಜಾ ಮಾಡಲಾಗಿದೆ, ಅಥವಾ ತಾತ್ಕಾಲಿಕ ಕೆಲಸದಿಂದ ತೆಗೆಯಲಾಗಿದೆ. ಕಾಂಗ್ರೆಸ್ ವಿರುದ್ಧ ಪ್ರಚಾರವು ಪತ್ರಿಕೆಗಳಲ್ಲಿ ಹಾಗೂ ರಮೇಶನ್ ಸಮಿತಿಯ ಮುಂದೆ ನಿರ್ವಿಘ್ನವಾಗಿ ಅವಿರತ ಸಾಗುತ್ತಲೇ ಇದೆ. ಈ ಸಮಿತಿಯು ಅಸಂಬದ್ಧ ಹಾಗೂ ಬೇಜಾವಾಬ್ದಾರಿ ಆಪಾದನೆಗಳನ್ನು ಕಾಂಗ್ರೆಸ್ಸಿನ ಮೇಲೆ ಹೊರಿಸಿದೆ. ಭೂಪಾಲಂ ಹಗರಣ, ಹ್ಯಾಮಿಲ್ಟನ್ ಪೋಲೀಸ್ ಠಾಣೆಯ ಚಳುವಳಿ ಇವೆಲ್ಲವೂ ಕಾಂಗ್ರೆಸ್ ಹಾಗೂ ಸರ್ಕಾರದ ನಡುವಿನ ಸಂಬಂಧವನ್ನು ಮತ್ತಷ್ಟು ಕಹಿಯಾಗಿ ಮಾಡಿದೆ. ಮಲ್ಲೇಶ್ವರದ ಅಧಿವೇಶನದಂತೆ ನ್ಯಾಯವಿಧಾಯ ಸಭೆಗೆ ಹಾಗೂ ಸ್ಥಳಿಯ ಸಂಸ್ಥೆಗಳಿಗೆ ರಾಜೀನಾಮೆ ಇತ್ತ ಸಂದರ್ಭವನ್ನು ಸರ್ಕಾರ ದುರುಪಯೋಗಿ-ಸಿಕೊಂಡಿದೆ. ಆ ಸಂದರ್ಭದಲ್ಲಿ ಕಾಂಗ್ರೆಸ್ ಆದೇಶವನ್ನು ಉಲ್ಲಂಘಿಸಿದ ವ್ಯಕ್ತಿಗಳು ಕಾಂಗ್ರೆಸ್ಸನ್ನೇ ಟೀಕಿಸುವಂತೆ ಪ್ರೇರೇಪಿಸಿ ಅವರ ದುರ್ಬಳಕೆಯಾಗಿದೆ. ಈ ಅಧಿವೇಶನಕ್ಕೆ ನೀಡಬೇಕಾಗಿದ್ದ ರೈಲು ಪ್ರಯಾಣದ ರಿಯಾಯಿತಿಯನ್ನಿನ್ನು ತೋರಿಸಿರುವುದಿಲ್ಲ. ವಿದ್ಯುತ್ ಸೌಲಭ್ಯ ಮೊದಲಾದ ಸಾಮಾನ್ಯ ಅನುಕೂಲತೆಗಳನ್ನೂ ನೀಡಿರುವುದಿಲ್ಲ.

ಇಷ್ಟರಲ್ಲೇ ಹೋರಾಟವನ್ನು ನಾವು ಎದುರಿಸಬೇಕಾಗಿ ಬಂದೀತೆಂಬುದು ಸ್ಪಷ್ಟವಾಗಿದೆ. ಶ್ರೀಮನ್ಮಹಾರಾಜರ ಆಶ್ರಯದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿತವಾಗಬೇಕೆಂಬ ಕೋರಿಕೆ ನಮ್ಮದು. ಇದನ್ನು ತಿಳಿಸಿ ಸೂಕ್ತ ಕ್ರಮ ಕೈಗೊಳ್ಳುವಂತೆ ಅಖಿಲ ಮೈಸೂರು ಕಾಂಗ್ರೆಸ್ಸಿಗೆ ನಾವು ಅಧಿಕಾರ ನೀಡಿದೆವು. ಈ ಸಮಿತಿಯು ಅರಸೀಕೆರೆಯಲ್ಲಿ ಸಭೆ ಸೇರಿತು. ಇಷ್ಟು ಹೊತ್ತಿಗಾಗಲೇ ವಾತಾವರಣವು ಬಿಸಿಯಾಗಿ ದಹಿಸುತ್ತಿತ್ತು. ಹ್ಯಾಮಿಲ್ಟನ್ ಪೋಲೀಸ್ ಕಟ್ಟಡದ ಸತ್ಯಾಗ್ರಹದಲ್ಲಿ ಹಲವು ತರುಣರು ಬಂಧಿಸಲ್ಪಟ್ಟಿದ್ದರು. ರಾಜದ್ರೋಹದ ಅಪರಾಧಕ್ಕಾಗಿ ಶ್ರೀ ಎಚ್. ಸಿದ್ದಯ್ಯ ಮತ್ತು ಶ್ರೀ ಟಿ. ಸುಬ್ರಮಣ್ಯ ಇವರು ಶಿಕ್ಷೆಗೆ ಗುರಿಯಾಗಿದ್ದು ಇವರನ್ನು ಜೈಲಿನಲ್ಲಿ ರಾಗಿ ಬೀಸುವಂತೆ ಬಲವಂತ ಪಡಿಸಲಾಗುತ್ತಿದೆ. ಇವೆಲ್ಲವೂ ಸರ್ಕಾರದ ಅತಿ ಘೋರ ನಿರ್ದಯೆಯನ್ನು ಸೂಚಿಸುತ್ತವೆ. ರಾಜಕೀಯ ಸುಧಾರಣಾ ಸಮಿತಿಯ ವರದಿಯಲ್ಲಿ ಜವಾಬ್ದಾರಿ ಸರ್ಕಾರದ ತಿರುಳೂ ಕೂಡ ಇರುವುದಿಲ್ಲ. ಇದು ಕಾಂಗ್ರೆಸ್ಸಿನ ಬೇಡಿಕೆಗೆ ಪ್ರತಿಸವಾಲು ಒಡ್ಡುವಂತಿದೆ.

ಇದೊಂದು ವಿಶೇಷ ಸಮಯವಾಗಿತ್ತು. ಹೋರಾಟದ ಹೊಸ್ತಿಲಲ್ಲಿ ನಾವಿದ್ದೆವು. ಆದರೆ ಸಾಧ್ಯವಾದಮಟ್ಟಿಗೆ ಹೋರಾಟ ಸಂಭವಿಸದಂತೆ ಮಾಡುವ ಉದ್ದೇಶದಿಂದ ದಿವಾನರನ್ನು ಸಂದರ್ಶಿಸಿ ವಿಚಾರ ವಿನಿಮಯ ಮಾಡುವಂತೆ ಅಧ್ಯಕ್ಷರಿಗೆ ಅಧಿಕಾರವಿತ್ತೆವು. ಗೌರವಾನ್ವಿತ ಒಪ್ಪಂದಕ್ಕೆ ಬರವಂತೆ ಪ್ರಯತ್ನಿಸುವುದು ಇದರ ಉದ್ದೇಶ. ಹೋರಾಟ ಅನಿವಾರ್ಯವೇ ಆದರೆ ವಿಧಿ ಇಲ್ಲದೇ ಸೂಕ್ತ ಕ್ರಮ ಕೈಗೊಳ್ಳುವಂತೆ ಕಾರ್ಯಕಾರಿ ಸಮಿತಿಗೆ ಅಧಿಕಾರವಿತ್ತೆವು. ೧೯೩೯ ಸೆಪ್ಟೆಂಬರ್ ಒಂದನೇ ತಾರೀಖಿನವರೆಗೆ ಕಾರ್ಯಕಾರಿ ಸಮಿತಿಯು ಪರಿಸ್ಥಿತಿಯನ್ನು ಅರಿಯಲು ಕಾದು ಕುಳಿತಿತು.

ಕಾಂಗ್ರೆಸ್ ಅಧ್ಯಕ್ಷರು ದಿವಾನರನ್ನು ಸಂದರ್ಶಿಸಲು ಅವರು ಅವಕಾಶ ನೀಡಲಿಲ್ಲ. ನ್ಯಾಯಳಾಗಿ ಎಲ್ಲ ದೃಷ್ಟಿಯಿಂದಲೂ ಇಂಥ ಅವಕಾಶವನ್ನು ಕೊಡಲೇ ಬೇಕಿತ್ತು. ಅಂತೆಯೇ ಈ ಸಂದರ್ಶನಕ್ಕೆ ಅವಕಾಶ ಕೊಟ್ಟಿದ್ದೇ ಆದರೆ ಕಳೆದ ಕೆಲವು ತಿಂಗಳುಗಳಲ್ಲಿ ಸಂಭವಿಸಿದ ಘಟನೆಗಳು, ಸಂಭವಿಸದೇ ಇರಬಹುದಾಗಿತ್ತು. ಆದರೆ ದಿವಾನರ ವಿವೇಕ ರಹಿತ, ತರ್ಕಬದ್ಧವಲ್ಲದ ಸಂದರ್ಶನ ನಿರಾಕರಣೆಯ ಕ್ರಮದಿಂದ ಈ ಅಗ್ನಿಪ್ರವೇಶ ಮಾಡಬೇಕಾಗಿತ್ತು. ಆ ಬೆಂಕಿಯ ಕಿಡಿ ಇನ್ನೂ ಆರಿರುವುದಿಲ್ಲ.

ಪ್ರಸ್ತುತ ಪರಿಸ್ಥಿತಿಯನ್ನು ಗಮನಿಸೋಣ. ಶಾಸನಭಂಗ ಚಳವಳಿಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಲಾಗಿದೆ. ಈ ಸಂದರ್ಭದಲ್ಲಿ ನಮ್ಮ ನಾಡಿನ ಸ್ತ್ರೀ-ಪುರುಷರು ಕಾಂಗ್ರೆಸ್ಸಿನ ಕರೆಗೆ ಓಗೊಟ್ಟು ಶಕ್ತಿಮೀರಿ ಕಷ್ಟಕಾರ್ಪಣ್ಯಗಳನ್ನು ಅನುಭವಿಸುತ್ತ ಮಾಡಿದ ಸ್ವಾರ್ಥತ್ಯಾಗಕ್ಕಾಗಿ ಕೃತಜ್ಞತಾಪೂರ್ವಕ ಅವರನ್ನು ನೆನೆಯುತ್ತೇನೆ ಹಾಗೂ ವಂದಿಸುತ್ತೇನೆ. ಸಮಯ ಬಂದಾಗ ಕಾಂಗ್ರೆಸ್ಸಿನ ಕರೆಗೆ ಓಗೊಟ್ಟು ಅಪಾರ ಕಷ್ಟ-ನಷ್ಟ ಅನುಭವಿಸಲು ಇವರು ಸರ್ವದಾ ಸಿದ್ಧರು. ಈ ರೀತಿ ಅನುಭವಿಸಿದ ಕೆಲವು ಸತ್ಯಾಗ್ರಾಹಿಗಳ ಹೆಸರನ್ನು ಉಲ್ಲೇಖಿಸುವುದು ಉಚಿತವಾಗದು. ಆದರೂ ಚಿತ್ರದುರ್ಗ ಜಿಲ್ಲೆಯ ತುರವನೂರ ಸ್ತ್ರೀಯರು ತೋರಿದ ಅಸಾಧಾರಣ ಧೈರ್ಯ-ಸ್ಥೈರ್ಯಗಳಿಗೆ ಮೆಚ್ಚಿಗೆ ವ್ಯಕ್ತಪಡಿಸದಿದ್ದರೆ ಉಚಿತವೆನಿಸದು.

ಸತ್ಯಾಗ್ರಹವನ್ನು ಸ್ಥಗಿತಗೊಳಿಸಿದ್ದರೂ ನಮ್ಮ ಹಲವು ನಾಯಕರು, ಸಹಪಾಠಿಗಳೂ ಇನ್ನೂ ಜೈಲಿನಲ್ಲಿಯೇ ಇದ್ದಾರೆ. ಸೆರೆಮನೆಯಲ್ಲಿರುವುದು ಮಾತ್ರವಲ್ಲ, ಹಲವು ಸಂಕಷ್ಟಗಳನ್ನು

ಅನುಭವಿಸುತ್ತಿದ್ದಾರೆ. ಕೆರೆಯ ನಿರ್ಮಾಣದ ಕೆಲಸ ನಡೆಯುತ್ತಿರುವ ಬೈರಮಂಗಲ ಮತ್ತು ತಿಪ್ಪಗೊಂಡನಹಳ್ಳಿಯಲ್ಲಿ ಕೆಲವು ಸತ್ಯಾಗ್ರಹಿಗಳು ದುಡಿಯುತ್ತಿದ್ದಾರೆ. ಪಾದಕ್ಕೆ ಪಾದರಕ್ಷೆಯಿಲ್ಲದೇ, ತಲೆಗೆ ಬಟ್ಟೆಯಿಲ್ಲದೇ ಸುಡುವ ಬಿಸಿಲಿನಲ್ಲಿ ನೆಲವನ್ನು ಅಗೆದು ಮಣ್ಣನ್ನು ಹೊರುವ ಕಷ್ಟಕರ ಕೆಲಸ ಮಾಡುತ್ತಿದ್ದಾರೆ. ಇವರ ಶ್ರಮದ ಉಸ್ತುವಾರಿ ನೋಡುತ್ತಿದ್ದ ಅಧಿಕಾರಿ ಪಾದಕ್ಕೆ ಪಾದರಕ್ಷೆಯಷ್ಟೇ ಅಲ್ಲದೆ ಬಿಸಿಲಿಗೆಂದು ಕೊಡೆಯನ್ನೂ ಬಳಸುತ್ತಿದ್ದಾರೆ. ಬಿಸಿಲಿನ ಬೇಗೆಯಲ್ಲಿರುವ ಇವರು ದೇಶಕ್ಕಾಗಿ ತಮ್ಮ ಜನ್ಮವನ್ನೇ ಮುಡುಪಾಗಿಟ್ಟವರು. ದೇಶಭಕ್ತರಾಗಿರುವುದೇ ಶಿಕ್ಷಿತರಾಗಿರುವ ರಾಜಕೀಯ ಧುರೀಣರು ಎಸಗಿರುವ ಅಪರಾಧ, ಹಾಗೂ ಅವರ ಶಿಕ್ಷಣವೇ ಇದಕ್ಕೆ ಕಾರಣ. ಅವರನ್ನು ನಡೆಸಿಕೊಳ್ಳುತ್ತಿರುವ ಕ್ರಮವು ಅಮೇರಿಕದ ನಿಗ್ರೋಗಳ ಪರಿಸ್ಥಿತಿಯನ್ನು ನೆನಪಿಗೆ ತರುತ್ತದೆ. ಅವರ ಬಗ್ಗೆಯಾಗಲೀ ಸ್ವತಃ ನನ್ನ ಬಗ್ಗೆಯಾಗಲಿ, ನಾನು ಯಾವ ಆಕ್ಷೇಪಣೆಯನ್ನೂ ಮಾಡುತ್ತಿಲ್ಲ. ಆದರೆ ಮನುಕುಲದಲ್ಲಿ ಯಾವುದು ಗೌರವಾನ್ವಿತ ಹಾಗೂ ಸುಸಂಸ್ಕೃತ ಎನಿಸಿಕೊಳ್ಳುತ್ತಿದೆಯೋ ಅವುಗಳ ಪರ ನಾನು ಪ್ರತಿಭಟಿಸುತ್ತೇನೆ. ಈ ರೀತಿಯಲ್ಲಿ ಕಷ್ಟಪಡುತ್ತಿರುವ ಧೈರ್ಯಶಾಲಿ ಬಂಧುಗಳ ಬಗ್ಗೆ ನನಗೆ ಅಪಾರ ಹೆಮ್ಮೆ ಮತ್ತು ಗೌರವ ನಾನು ಅವರನ್ನು ಹುತ್ಪೂರ್ವಕವಾಗಿ ವಂದಿಸುತ್ತೇನೆ.

ದಂಡವಿಧಿಸಿ ಸತ್ಯಾಗ್ರಹಿಗಳ ಮನೆಗಳನ್ನು ಜಪ್ತಿ ಮಾಡಿ ಚರವಸ್ತುಗಳನ್ನು ವಶಪಡಿಸಿಕೊಂಡು ದಂಡ ವಸೂಲು ಮಾಡುತ್ತಿರುವ ಕ್ರಮ ನೀವೇ ಬಲ್ಲಿರಿ. ಇದಲ್ಲದೆ ಜೈಲಿನ ಬದುಕು ಮತ್ತಷ್ಟು ಕಠಿಣವಾಗುತ್ತಿದೆ. ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಇಬ್ಬರು ಸತ್ಯಾಗ್ರಹಿಗಳಿಗೆ ಕ್ರೂರತರವಾದ ಛಡಿ ಶಿಕ್ಷೆ ಜಾರಿಮಾಡಿರುವುದು ನಿಮಗೂ ತಿಳಿದಿದೆ. ನಮ್ಮ ಬಂಧುಗಳ 'ಅಕ್ರಮ' ಎನಿಸಿಕೊಳ್ಳುವ 'ಅಪರಾಧ'ಗಳಿಗಾಗಿ ಅವರ ವಕಿಲ ನಾಮೆಯನ್ನು ಕಸಿದುಕೊಂಡು ಅವರು ನ್ಯಾಯಾಲಯಗಳಲ್ಲಿ ವಾದಿಸದಂತೆ ಮಾಡಿರುವ ಕ್ರಮವೂ ತಮಗೆ ತಿಳಿದಿರಬೇಕು.

ಒಳ್ಳೆಯ ಭಾವನೆಯಿರುವ ನಮ್ಮ ಕೆಲವು ಸ್ನೇಹಿತರಲ್ಲಿ ಸತ್ಯಾಗ್ರಹವನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಿರುವ ಬುದ್ಧಿವಂತಿಕೆಯನ್ನು ಪ್ರಶ್ನಿಸಲಾಗುತ್ತಿದೆ. ಶಾಸನ ಸಭೆಗಳು ಹಾಗೂ ಸ್ಥಳೀಯ ಸಂಸ್ಥೆಗಳಿಗೆ ರಾಜಿನಾಮೆ ಸಲ್ಲಿಸುವಂತೆ ಕೈಗೊಂಡಿರುವ ಕ್ರಮವನ್ನು ಪ್ರಶ್ನಿಸುತ್ತಿದ್ದಾರೆ. ಯಾವ ಸನ್ನಿವೇಶದಲ್ಲಿ ಈ ಕ್ರಮಗಳನ್ನು ಕೈಗೊಳ್ಳಲಾಯಿತು ಎಂಬುದರ ಅರಿವಿಲ್ಲದೆ ತಪ್ಪು ತಿಳುವಳಿಕೆಯಿಂದ ಈ ಬಗೆಯ ಟೀಕೆ ಮಾಡಲಾಗುತ್ತಿದೆ.

ಸಾರ್ವಜನಿಕ ಸಂಸ್ಥೆಗಳಿಗೆ ರಾಜೀನಾಮೆ ಸಲ್ಲಿಸುವಂತೆ ಕಾಂಗ್ರೆಸ್ಸಿಗರಿಗೆ ಮಲ್ಲೇಶ್ವರದ ನಿರ್ಣಯದಂತೆ ನಡೆದುಕೊಳ್ಳಲು ನೀಡಿದ ಆದೇಶವು ನಮ್ಮ ಬಗ್ಗೆ ಸರ್ಕಾರವು ತಾಳಿರುವ ವಿಚಾರದಲ್ಲಿ ನಮ್ಮ ಅಸಮಾಧಾನ ವ್ಯಕ್ತಪಡಿಸುವುದಕ್ಕಾಗಿ. ನಮ್ಮ ದೃಷ್ಟಿಯಲ್ಲಿ ಅತ್ಯಂತ ಸರಳವೂ, ಸಾತ್ವಿಕವೂ, ಸಾಮಾನ್ಯವೂ ಆದ ನಮ್ಮ ಬೇಡಿಕೆಗಳನ್ನು ಮಾನ್ಯ ಮಾಡಲು ನಾವು ನಡೆಸಿದ ಎಲ್ಲ ಪ್ರಯತ್ನಗಳೂ ತಿರಸ್ಕೃತವಾದ ಕಾರಣ ಅನ್ಯಮಾರ್ಗವಿಲ್ಲದೆ ನಾವು ಹೋರಾಟ ಕೈಗೊಳ್ಳಬೇಕಾಯಿತು. ಇಷ್ಟೆಲ್ಲ ಆದರೂ ಸಾಧ್ಯವಾದ ಮಟ್ಟಿಗೆ ಹೋರಾಟ ಸಂಭವಿಸದಂತೆ ಮಾಡಲು ನಮ್ಮ ತೊಂದರೆಗಳನ್ನು ನಿವಾರಿಸುವಲ್ಲಿ ಸರ್ಕಾರಕ್ಕೆ ಇನ್ನೊಂದು ಅವಕಾಶ ಕೊಡೋಣವೆಂಬ ಸದುದ್ದೇಶದಿಂದ ಸಾರ್ವಜನಿಕ ಸಂಸ್ಥೆಗಳಲ್ಲಿ ನಮ್ಮ ಸ್ಥಾನ ಕಳೆದುಕೊಳ್ಳಲು ನಾವು ತೀರ್ಮಾನಿಸಿದೆವು. ಇದು ಸ್ವಯಂ ನಿರ್ಧರಿತ ಸ್ವಾರ್ಥತ್ಯಾಗ. ಈ ಕ್ರಮ ಸಾಮಾನ್ಯವಾಗಿ

ಸರ್ಕಾರದ ಸಹಾನುಭೂತಿಗೆ, ಅನುಕಂಪಕ್ಕೆ ದಾರಿಯಾಗಿ ನಮ್ಮನ್ನು ಅವರ ವಿಶ್ವಾಸಕ್ಕೆ ತೆಗೆದುಕೊಳ್ಳಬೇಕಾಗಿತ್ತು. ಆದರೆ ಅವರ ಹೃದಯ ಕರಗಲಿಲ್ಲ. ಪ್ರತಿಯಾಗಿ ಈ ಸಮಯವನ್ನು ಬಳಸಿಕೊಂಡು ವಿಗತಿಶೀಲ ಶಾಸನಗಳನ್ನು ಅಂಗೀಕರಿಸುವಂತೆ ಮಾಡಿತು. ನಾವು ಶಾಸನ ಸಭೆಗಳಲ್ಲಿ ಇದ್ದಿದ್ದರೂ ಈ ಪ್ರಗತಿವಿರೋಧಿ ಕಾನೂನುಗಳು ಒಪ್ಪಿಕೊಳ್ಳುವಂತೆ ಅವರು ಮಾಡುತ್ತಿದ್ದರು. ಒಳಗಿದ್ದು ನಾವು ಪ್ರತಿಭಟಿಸಬಹುದಾಗಿತ್ತು ನಿಜ, ಆದರೆ ಅದು ನಿಷ್ಪ್ರಯೋಜಕವಾಗುತ್ತಿತ್ತು. ಈಗಿನ ಶಾಸನ ಸಭೆಗಳು ಹೌದಪ್ಪನವರಿಂದ ತುಂಬಿದ್ದ ಸರ್ಕಾರದ ಅಪೇಕ್ಷೆಯಂತೆ ನಡೆದುಕೊಳ್ಳುತ್ತಿವೆ ಎಂಬುದು ಸರ್ಕಾರಕ್ಕೂ ತಿಳಿದಿದೆ. ಇದನ್ನು ನಮ್ಮ ಜನರೂ ಹಾಗೂ ಹೊರನಾಡಿನವರೆಲ್ಲರು ಬಲ್ಲರು. ಆದಕಾರಣ ಇಂಥ ಹೌದಪ್ಪ ಸಂಸ್ಥೆಗಳಿಂದ ನಮ್ಮ ಕಾಂಗ್ರೆಸ್ ಪ್ರತಿನಿಧಿಗಳು ಹೊರಬಂದುದೇ ತರ್ಕಬದ್ಧವಾದ ಸರಿಯಾದ ಕ್ರಮ.

ಈ ರಾಜೀನಾಮೆಗಳಿಂದ ಕಾಂಗ್ರೆಸ್ಸಿಗೆ ಹಾಗೂ ದೇಶಕ್ಕೆ ಆಗಿರುವ ಪ್ರಯೋಜನ ಅಳೆಯಲಾಗದಷ್ಟು. ಈ ಸ್ಥಾನಗಳಿಗೆ ಮರುಳಾದವರು ಹಲವರು. ಈ ಸ್ಥಾನಗಳಿಗೆ ಅಂಟಿಕೊಂಡಿರಬೇಕೆಂಬ ಆಕಾಂಕ್ಷೆಯನ್ನು ನಮ್ಮ ಕಾರ್ಯಕರ್ತರು ಗ್ರಹಿಸಿದ್ದಾರೆ. ಈ ಝಗಝಗಿಸುವ ಆಸೆಗಳನ್ನು ಮೀರಿ ಸ್ಥಾನಗಳನ್ನು ತೃಣೀಕರಿಸಿ ತೊರೆಯುವುದರ ಮೂಲಕ ತಮ್ಮ ಕರ್ತವ್ಯ ಪಾಲಿಸಿದ್ದಾರೆ. ಅಲ್ಲದೇ ದೇಶಕ್ಕಾಗಿ ತ್ಯಾಗ ಮಾಡಬಲ್ಲ ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾರೆ. ಈ ಜನ ಸಮಯ ಬಂದಾಗ ವಿಶ್ವಾಸಪಾತ್ರರಾಗಿ ಕಠಿಣ ಕಾರ್ಯಗಳನ್ನು ಸಾಧಿಸಬಲ್ಲರೆಂದು ತಮ್ಮ ನಡತೆಯಿಂದ ತೋರಿಸಿಕೊಟ್ಟಿದ್ದಾರೆ. ಈ ರೀತಿಯಲ್ಲಿ ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ಕಾಂಗ್ರೆಸ್ಸಿಗೂ, ದೇಶಕ್ಕೂ ಅಪರಿಮಿತ ಉಪಕಾರವೆಸಗಿರುತ್ತಾರೆ.

ಸತ್ಯಾಗ್ರಹವನ್ನು ತಾತ್ಕಾಲಿಕವಾಗಿ ನಿಲ್ಲಿಸಿದ್ದು ಸಮಯೋಚಿತವಲ್ಲವೆಂದು ತಿಳಿದುಕೊಂಡಿರುವುದೂ ತಪ್ಪು. ವಿರೋಧಿಯೆಂದು ಕಾಣುವ ವ್ಯಕ್ತಿಯ ಹೃದಯ ಪರಿವರ್ತನೆಯೇ ಸತ್ಯಾಗ್ರಹದ ತಂತ್ರ. ಇದು ಸಿದ್ಧಿಸದೇಹೋದರೆ ಅದಕ್ಕೆ ಏನು ಕಾರಣ ಎಂದು ಗ್ರಹಿಸಿ ಅಸ್ತ್ರವನ್ನು ಸರಿಪಡಿಸಿಕೊಳ್ಳಬೇಕು. ಸತ್ಯಾಗ್ರಹವನ್ನು ಯಾವ ಹಂತದಲ್ಲಾದರೂ ನಿಲ್ಲಿಸಬಹುದು. ಅಂತೆಯೇ ಪುನಃ ಪ್ರಾರಂಭಿಸಲೂ ಬಹುದು. ಇದನ್ನು ಸಮನಾದ ಮಾರ್ಗದಲ್ಲಿ ನಡೆಯುವುದಕ್ಕೆ ಹೋಲಿಸಬಹುದು. ಎಲ್ಲಿಯಾದರೂ ಪ್ರಯಾಣ ನಿಲ್ಲಿಸಬಹುದು, ಮತ್ತೆ ಪುನರಾರಂಭಿಸಬಹುದು. ಸತ್ಯಾಗ್ರಹಕ್ಕೆ ಸತ್ಯಾಗ್ರಹಿಗೆ ಅಪಜಯವಿಲ್ಲ. ನಮ್ಮ ಗೆಲುವಿನ ದೃಷ್ಟಿಯಿಂದ ಶಾಸನಬಂಘ ಚಳವಳಿಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಬೇಕಾಗಿಬಂತು. ನಮ್ಮ ನಿಲುವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಅಹಿಂಸೆಯ ಮೂಲ ತತ್ವಗಳನ್ನು ಸರಿಯಾಗಿ ಗ್ರಹಿಸಬೇಕು. ಈ ರೀತಿ ಅರಿತುಕೊಂಡಲ್ಲಿ ಮಾತ್ರ ಕಾಂಗ್ರೆಸ್ಸು ಕೈಗೊಂಡ ಕ್ರಮವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಾಧ್ಯ.

ಇನ್ನು ಕೆಲವು ಉದ್ದೇಶಿತ ಸುಧಾರಣೆಗಳತ್ತ ನಮ್ಮ ಕಣ್ಣು ಹಾಯಿಸೋಣ. ನಾವು ಬಹು ಜನರು ಜೈಲಿನಲ್ಲಿದ್ದಾಗ ಕೆಲವು ಸುಧಾರಣೆಗಳನ್ನು ಘೋಷಿಸಲಾಗಿದೆ. ನಾವು ಊಹಿಸಿದ್ದಕ್ಕಿಂತ ಇವೇನೂ ಅಷ್ಟು ಉತ್ತಮವಾಗಿಲ್ಲ. ಇವು ಅತೃಪ್ತಿಕರವಾಗಿರುವುದು ಮಾತ್ರವಲ್ಲ, ಇನ್ನು ಕೆಲವು ವಿಷಯಗಳಲ್ಲಿ ಪ್ರಗತಿಗೆ ಮಾರಕವಾಗುವಂತವುಗಳಾಗಿವೆ. ಕಾರ್ಯಾಂಗವು ಶಾಸನಾಂಗಕ್ಕೆ ಹೊಣೆಯಾಗಿರುವುದಿಲ್ಲ. ಅಲ್ಲದೆ, ಅವಿಶ್ವಾಸ ನಿರ್ಣಯವನ್ನು ಮಂಡಿಸುವಂತೆಯೂ ಇಲ್ಲ.

ತರ್ಕಿಸುವಂತೆಯೂ ಇಲ್ಲ. ಸಭೆಯು ಅಧಿಕಾರ ವರ್ಗವನ್ನೂ, ಪ್ರಜಾ ಪ್ರತಿನಿಧಿಗಳನ್ನೂ ಒಳಗೊಂಡಿರುತ್ತದೆ. ಆದರೆ ಇಲ್ಲಿ ಅಧಿಕಾರಿಗಳ ಸಂಖ್ಯೆಯೇ ಅಧಿಕ. ಪ್ರಜಾ ಪ್ರತಿನಿಧಿ ಸಭೆಯ ಅಧ್ಯಕ್ಷರು ದಿವಾನರು. ಅವರು ತಮ್ಮ ಇಷ್ಟ ಬಂದಲ್ಲಿ ನಿರ್ಣಯಗಳನ್ನು ನಿರಾಕರಿಸಬಹುದು, ಅಥವಾ ಒಪ್ಪಿಕೊಳ್ಳಬಹುದು. ನ್ಯಾಯ ವಿಧಾಯಕ ಸಭೆ ಮತ್ತು ಪ್ರಜಾ ಪ್ರತಿನಿಧಿ ಸಭೆ ಎರಡಕ್ಕೂ ಅವರು ಆಧೀನರಲ್ಲ.

ನ್ಯಾಯ ವಿಧಾಯಕ ಸಭೆ ಮತ್ತು ಪ್ರಜಾ ಪ್ರತಿನಿಧಿ ಸಭೆ ಈ ಎರಡೂ ಸಭೆಗಳಲ್ಲೂ ಸಾರ್ವಜನಿಕ ಕ್ಷೇತ್ರದಿಂದ ಚುನಾಯಿತರಾದ ನಿಜವಾದ ಪ್ರತಿನಿಧಿಗಳ ಸಂಖ್ಯೆಗಿಂತ ಕೆಲವು ವಿಶೇಷ ಕ್ಷೇತ್ರಗಳು ಹಾಗೂ ಅಲ್ಪ ಸಂಖ್ಯಾತರು, ಅಲ್ಲದೇ ಸರ್ಕಾರದಿಂದ ನೇಮಿತರಾದವರ ಸಂಖ್ಯಾಬಲ ಅಧಿಕವಾಗಿರುತ್ತದೆ. ಪಟೇಲ್ ಮತ್ತು ಶ್ಯಾನುಭೋಗರುಗಳಿಗೆ ಸ್ಥಾನಗಳನ್ನು ಕೊಟ್ಟು ಸಂತೃಪ್ತಿಗೊಳಿಸುವಂತೆ ಮಾಡಲಾಗಿದೆ. ಇದು ಕೇವಲ ಭ್ರಮೆ. ಸರ್ಕಾರದ ವಿರುದ್ಧ ಮಾತಾಡಿದರೆ ತಮ್ಮ ಅಧಿಕಾರ ಕಳೆದುಕೊಳ್ಳುವುದು ನಿಜ. ಈ ಭಯ ಅವರನ್ನು ಹತೋಟಿಯಲ್ಲಿ ಇಟ್ಟಿದೆ. ಕೆಲವು ಅಪ್ರಮುಖ ವಿಚಾರಗಳಲ್ಲಿ ಅವರಿಗೆ ಹೆಚ್ಚು ಅಧಿಕಾರ ನೀಡಲಾಗಿದೆ. ಈಗಿನ ಸಭೆಯ ಅಧಿಕಾರಕ್ಕಿಂತ ಉದ್ದೇಶಿತ ಸುಧಾರಣೆಗಳು ಹೆಚ್ಚಿನ ಅಧಿಕಾರವನ್ನೇನೂ ಕೊಡುವುದಿಲ್ಲ. ಮತಾಧಿಕಾರವೂ ಸೀಮಿತ. ೭೦ ಲಕ್ಷ ಪ್ರಜೆಗಳಲ್ಲಿ ಸುಮಾರು ೫ ಲಕ್ಷ ಜನರಿಗೆ ಮಾತ್ರ ಓಟು ಕೊಡುವ ಅಧಿಕಾರವುಂಟು. ಹಿಂದೂ ಮುಸಲ್ಮಾನರಿಗೆ ಪ್ರತ್ಯೇಕ ಚುನಾವಣೆ. ಧರ್ಮದ ಆಧಾರದ ಮೇಲೆ ಚುನಾವಣೆಗಳು ನಡೆಯಬಾರದೆಂಬ ಸಾರ್ವತ್ರಿಕ ಅಭಿಮತಕ್ಕೆ ವಿರುದ್ಧವಾಗಿ ಮೊದಲ ಬಾರಿಗೆ ಮೈಸೂರಿನಲ್ಲಿ ಮತ ಆಧಾರಿತ ಪ್ರತ್ಯೇಕ ಚುನಾವಣಾ ಪದ್ಧತಿಯನ್ನು ಜಾರಿಗೆ ತರಲಾಗಿದೆ. ಹಿಂದೂ ಹಾಗೂ ಮುಸಲ್ಮಾನ್ ಇಬ್ಬರಿಗೂ ಇದು ಅತ್ಯಂತ ಹಾನಿಕರ ಪದ್ಧತಿ. ಉಭಯ ಸದನಗಳಿಗೂ ತಮ್ಮ ಅಧ್ಯಕ್ಷರನ್ನು ಚುನಾಯಿಸುವ ಅಧಿಕಾರವಿಲ್ಲ. ದಿವಾನರು ಪ್ರಜಾ ಪ್ರತಿನಿಧಿ ಸಭೆಯ ಅಧ್ಯಕ್ಷರು. ಮೊದಲ ಹಂತದಲ್ಲಿ ಸರ್ಕಾರದಿಂದ ನೇಮಕವಾಗುವವರು ನ್ಯಾಯ ವಿಧಾಯಕ ಸಭೆಯ ಕಾರ್ಯಕಲಾಪ ನಡೆಸುತ್ತಾರೆ. ಜವಾಬ್ದಾರಿ ಸರ್ಕಾರ ಈ ರೀತಿಯಲ್ಲಿ ತಿರಸ್ಕೃತವಾಗಿರುವುದು ಮಾತ್ರವಲ್ಲ, ಜವಾಬ್ದಾರಿ ಸರ್ಕಾರ ಸ್ಥಾಪಿಸುವುದು ತನ್ನ ಗುರಿ ಎಂದು ಈ ಸರ್ಕಾರ ಒಪ್ಪಿಕೊಳ್ಳುತ್ತಿಲ್ಲ. ಕಾರ್ಯಾಂಗವು ಜನರ ಮೂಲಾಧಿಕಾರಗಳನ್ನು ಅಪಹರಿಸದಂತೆ ಅಥವಾ ಮೊಟಕು ಮಾಡದಂತೆ ರಕ್ಷಿಸುವ ಭರವಸೆಯನ್ನು ನೀಡಿಲ್ಲ. ನ್ಯಾಯಾಲಯದ ಸ್ವಾತಂತ್ರ್ಯ ರಕ್ಷಿತವಾಗಿಲ್ಲ. ನ್ಯಾಯಾಧೀಶರನ್ನು ಸರ್ಕಾರ ತನ್ನ ಮನ ಬಂದಂತ ವಜಾ ಮಾಡಬಹುದು, ಅಥವಾ ಅವರ ಅವಧಿಯನ್ನು ಅವಲಂಬಿಸಬಹುದು. ಪೋಲಿಸರ ಜಿಲ್ಲಾಧಿಕಾರಿಯಾದ ಜಿಲ್ಲಾಧಿಕಾರಿ ಅಥವಾ ಡೆಪ್ಯುಟಿ ಕಮೀಷನರ್ ಅಧೀನ ಮ್ಯಾಜಿಸ್ಟ್ರೇಟರು. ಕಾರ್ಯಾಂಗದ ಅಧಿಕಾರಿಗಳನ್ನು ಮ್ಯಾಜೀಸ್ಟ್ರೇಟರನ್ನು ಅದಲು-ಬದಲು ಮಾಡಲಾಗುತ್ತಿದೆ. ಸರ್ಕಾರದ ಲೆಕ್ಕ ತಪಾಸಣೆ ಮಾಡಲು ಸ್ವತಂತ್ರ ಆಡಿಟರುಗಳನ್ನು ನೇಮಿಸಲಾಗುತ್ತಿಲ್ಲ. ಸ್ಥಳೀಯ ಸರ್ಕಾರ ಅಥವಾ ಆಡಳಿತವನ್ನು ಎಂದಿನಂತೆ ಸರ್ಕಾರ ತನ್ನ ಅಧೀನವಾಗಿಟ್ಟು ಅದನ್ನು ಮೊಟಕು ಮಾಡುತ್ತಿದೆ.

ಯಾವ ದೃಷ್ಟಿಯಿಂದ ಪರಿಶೀಲಿಸಿದರೂ ಸಂಪೂರ್ಣ ಅಸಮರ್ಪಕವಾಗಿರುವುದು ಮಾತ್ರವಲ್ಲ ದೇಶಕ್ಕೆ ಹಾಗೂ ದೇಶದ ಪ್ರಗತಿಗೆ, ಶಾಂತಿಗೆ ಬಹಳಷ್ಟು ಹಾನಿ ಮಾಡುವುದಾಗಿಯೂ ಇದೆ.

ರಾಜ್ಯದಾದ್ಯಂತ ಕಾಂಗ್ರೆಸ್ ಜನತೆಯ ನೂರಾರು ಬಹಿರಂಗ ಸಭೆಗಳನ್ನು ನಡೆಸಿರುತ್ತದೆ. ಈ ರಾಜಕೀಯ ಸುಧಾರಣೆಗೆ ಜನಾಭಿಪ್ರಾಯ ಸಂಪೂರ್ಣ ವಿರೋಧವಾಗಿದೆ ಎಂಬುದು ನಿಸ್ಸಂದೇಹ, ಸ್ಪಷ್ಟ.

**೭) (೨೮-೧೦-೧೯೪೫ - ಕೋಚಿನ್‌ನ ರಾಜ್ಯ ಪ್ರಜಾ ಮಂಡಳಿಯ ಸಮ್ಮೇಳನದಲ್ಲಿ ಇರಿಂಜಲಕಾಡಿನಲ್ಲಿ ಭಾಷ್ಯಂ ಮಾಡಿದ ದೀರ್ಘ ಅಧ್ಯಕ್ಷ ಭಾಷಣ ಮೈ ನವಿರೇಳಿಸುವಂತಹದ್ದು. ಆ ಭಾಷಣದ ಕೆಲವು ಪ್ರಮುಖ ಅಂಶಗಳನ್ನು ಇಲ್ಲಿ ಕೊಡಲಾಗುತ್ತಿದೆ.**

ನಮ್ಮ ದೇಶದ ಧೀರರ ತ್ಯಾಗದ ಪರಿಣಾಮವಾಗಿ, ಭಾರತ ಬಿಟ್ಟು ತೊಲಗಿ ಎಂದು ಬ್ರಿಟಿಷರಿಗೆ ಹೇಳುವ ಧೈರ್ಯಗಳಿಸಿದ್ದೇವೆ. ಕೇವಲ ಬ್ರಿಟಿಷರು ಮಾತ್ರವಲ್ಲ ಎಲ್ಲ ವಿದೇಶಿಯರು ಭಾರತದಿಂದ ಮಾತ್ರವಲ್ಲ, ಇಡೀ ಏಷ್ಯಾ ಖಂಡದಿಂದ ಕಾಲ್ತೆಗೆಯಬೇಕು. ಇಂಡೋನೇಷ್ಯದವರು ಮತ್ತು ಇತರ ಏಷ್ಯದವರು ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವರು. ನಮ್ಮ ಸಹಾನುಭೂತಿ ಅಲ್ಲದೆ ನಮ್ಮ ಬೆಂಬಲವನ್ನೂ ಅವರಿಗೆ ನೀಡುವುದು ಅಗತ್ಯ. ಇಂದು ನಾವು ಅವರಿಗೆ ನಮ್ಮ ನೈತಿಕ ಬೆಂಬಲ ಮಾತ್ರ ನೀಡಬಲ್ಲ ಪರಿಸ್ಥಿತಿಯಲ್ಲಿದ್ದೇವೆ. ಇದಕ್ಕಿಂತ ಹೆಚ್ಚಾಗಿ ಏನನ್ನೂ ಮಾಡುವ ಸ್ಥಿತಿಯಲ್ಲಿಲ್ಲ. ಮುಂದೆ ನಾವು ಸ್ವತಂತ್ರ್ಯಗಳಿಸಿ ಸ್ವತಂತ್ರರಾಗಲು ನಮ್ಮ ಕೈಲಾದ ಸಹಾಯ ಮಾಡಲು ಸಾಧ್ಯವಾದೀತೆಂದು ಹಾರೈಸೋಣ. ನಮ್ಮ ಸ್ವಾತಂತ್ರ್ಯ ನಮ್ಮ ಭರತ ಭೂಮಿಯ ಸ್ವಾತಂತ್ರ್ಯ. ದೇಶಿಯ ಸಂಸ್ಥಾನಗಳ ಹಾಗೂ ಬ್ರಿಟಿಷ್ ಪ್ರಾಂತ್ಯಗಳ ಸ್ವಾತಂತ್ರ್ಯವನ್ನು ನಾವಿಂದೂ ಗಳಿಸಬೇಕಾಗಿದೆ. ದೇಶವಿದೇಶಗಳ, ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಕೊಚ್ಚಿಯ ಭವಿಷ್ಯದ ಕಾರ್ಯಕ್ರಮಗಳನ್ನು ರೂಪಿಸಲು ನೀವು ಇಲ್ಲಿ ಸೇರಿರುವಿರೆಂದು ನಾನು ಭಾವಿಸುತ್ತೇನೆ. ಸಂಪೂರ್ಣ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಲು ನೀವು ಸೂಕ್ತ ಕಾರ್ಯಕ್ರಮ ರೂಪಿಸಲು ಉತ್ಸುಕರಿದ್ದೀರೆಂದು ನಾನು ತಿಳಿದಿದ್ದೇನೆ.

ಪ್ರಪಂಚದ ಪರಿಸ್ಥಿತಿ ನಾಗಾಲೋಟದಲ್ಲಿ ಬದಲಾಯಿಸುತ್ತಿದೆ. ಯುದ್ಧ ಅಂತ್ಯಗೊಂಡಿದೆ. ರಾಷ್ಟ್ರಗಳು ಎಂದಿನ ಸಾಮಾನ್ಯ ಪರಿಸ್ಥಿತಿಗೆ ಮರಳುತ್ತಿವೆ. ಜನತೆ ತಮ್ಮ ದಿನನಿತ್ಯದ ಶಾಂತ ಕಾರ್ಯಕ್ರಮಗಳಿಗೆ ಹಿಂದಿರುಗುತ್ತಿದ್ದಾರೆ. ಈ ಯುದ್ಧದ ಗುರಿ ಪ್ರಜಾಪ್ರಭುತ್ವದ ರಕ್ಷಣೆ ಹಾಗೂ ಶ್ರೀಸಾಮಾನ್ಯನ ಹಕ್ಕುಗಳ ಸಂರಕ್ಷಣೆ ಎಂದು ಹೇಳಲಾಗುತ್ತಿದೆ. ಅಟ್ಲಾಂಟಿಕ್ ಘೋಷಣೆ, ಪೋಸ್ಟ್ ಡಾಂ ಒಪ್ಪಂದ, ಸ್ಯಾನ್‌ಫ್ರಾನ್ಸಿಸ್ಕೋ ಪ್ರಗತಿಯನ್ನು ಸಾಧಿಸುವಂತೆಯೂ ಮಾಡುವುದಾಗಿದೆ. ಈ ದಿಸೆಯಲ್ಲಿ ಭಾರತಕ್ಕೆ ಬ್ರಿಟಿಷ್ ಪ್ರಭುತ್ವ ನೀಡಿರುವ ಭರವಸೆ ಸತ್ಯ ವಚನ ಇವುಗಳಂತೆ ಬ್ರಿಟನ್ ಭಾರತದ ಮೇಲಿರುವ ತನ್ನ ಹಿಡಿತವನ್ನು ಬಿಟ್ಟುಕೊಟ್ಟೀತೆಂದು ನಿರೀಕ್ಷಿಸುತ್ತೇವೆ. ಇಂಗ್ಲೆಂಡ್ ಭಾರತದ ಮೇಲಿನ ತನ್ನ ಹಿಡಿತವನ್ನು ಬಿಟ್ಟುಕೊಡುವ ಪ್ರಶ್ನೆಯೇ ಏನೂ ಉಳಿದಿಲ್ಲ. ಭಾರತೀಯರು ಅಧಿಕಾರವನ್ನು ತಮ್ಮ ಹಸ್ತಗತ ಮಾಡಿಕೊಳ್ಳಲು ಹೊರಟಿದ್ದಾರೆ. ಇನ್ನು ಒಂದೆರಡು ವರ್ಷಗಳಲ್ಲಿಯೇ ಪ್ರತಿಯೊಂದು ಪ್ರಾಂತ್ಯದಲ್ಲೂ ಸ್ವಯಂ ಅಧಿಕಾರ ಸ್ಥಾಪಿತವಾಗುವುದರಲ್ಲಿ ಸಂದೇಹವೇ ಇಲ್ಲ. ಅಲ್ಲದೇ, ಕೇಂದ್ರದಲ್ಲಿ ರಾಷ್ಟ್ರೀಯ ಸರ್ಕಾರ ಅಧಿಕಾರ ಸೂತ್ರ ವಹಿಸಿಕೊಳ್ಳುವುದು ಖಚಿತವಾಗಿದೆ. ದೇಶದ ಆರ್ಥಿಕ ಪ್ರಗತಿಗೆ, ಜನರ ಪುರೋಭಿವೃದ್ಧಿಗೆ ಇದು ಮೊದಲ ಹೆಜ್ಜೆ ಆದೀತು.

ಇಂದಿನ ಭಾರತ ಸಾಮಾಜಿಕ ಚಿತ್ರದಲ್ಲಿ ದೇಶೀಯ ಸಂಸ್ಥಾನಗಳ ಪ್ರಜೆಗಳ ಪಾತ್ರವೇನು? ಇದು ನಿಮ್ಮ ಮುಂದಿನ ಪ್ರಶ್ನೆ. ಮಹಾರಾಜರ ಕೃಪಾಶ್ರಯದಲ್ಲಿ ಜವಾಬ್ದಾರಿ ಸರ್ಕಾರ ಎಂಬ ಅಸ್ಪಷ್ಟ ಮಾತುಗಳು ಕೇಳಿ ಬರುತ್ತಿವೆ. ಜವಾಬ್ದಾರಿ ಸರ್ಕಾರದ ಮೇಲಂತಸ್ತಿಗೆ ನಾವು ಏರಿ ಸ್ವತಂತ್ರ ಭಾರತದ ಕಲ್ಪನೆಯತ್ತ ಗಮನ ಹರಿಸಬೇಕಾಗಿದೆ.

ಇದು ಅನೇಕ ಸಮಸ್ಯೆಗಳಿಗೆ ಎಡೆ ಮಾಡಿಕೊಡುತ್ತದೆ. ಸಂಸ್ಥಾನಗಳು ಜೀವಂತವಾಗಿರಬೇಕೆ? ಅವು ಯಾವ ಬಗೆಯಲ್ಲಿ ಕಾರ್ಯ ನಿರ್ವಹಿಸಬಲ್ಲವು? ಬ್ರಿಟಿಷ್ ಪ್ರಾಂತಗಳಲ್ಲಿರುವಂತೆ ಸ್ವಯಂ ಆಡಳಿತ ಪ್ರಜಾಪ್ರಭುತ್ವವಾಗಿ ಬಾಳಬಲ್ಲವೋ ಅಥವಾ ಈಗಿರುವಂತೆಯೇ ಮುಂದುವರಿಯುತ್ತವೆಯೋ? ಅರಸರು ಭಾರತ ಸರ್ಕಾರಕ್ಕೆ ಋಣಿಯಾಗಿ ನಡೆದುಕೊಳ್ಳುತ್ತಾರೋ ಅಥವಾ ಬ್ರಿಟಿಷ್ ಪ್ರಭುತ್ವದೊಡನೆ ಕರಾರು ಮಾಡಿ ಸರ್ವತಂತ್ರ ಅರಸರಾಗಿ ಬಾಳ ಬಯಸುತ್ತಾರೋ? ಅವರು ಈಗಾಗಲೇ ಮಾಡಿಕೊಂಡಿರುವ ಒಪ್ಪಂದಗಳ, ಕರಾರುಗಳ ಗತಿ ಏನು? ರಾಜತ್ವದ ಅಧಿಕಾರ ಭಾರತದ ಸ್ವತಂತ್ರ ಪ್ರಜೆಗಳಿಗೆ ಸೇರಿದ್ದು. ಈ ಅಧಿಕಾರವನ್ನು ಉಪಯೋಗಿಸಿ ಅವರು ರಾಷ್ಟ್ರೀಯ ಸರಕಾರ ನಡೆಸಲು ಅರಸರು ಒಪ್ಪಿಕೊಳ್ಳುತ್ತಾರೆಯೇ? ಸಂಸ್ಥಾನಗಳು ನೆರೆಯ ಪ್ರಾಂತಗಳೊಡನೆ ಐಕ್ಯವಾಗಲು ಸಮ್ಮತಿಸುವವೆ? ಒಪ್ಪುವುದಾದಲ್ಲಿ ಅದಕ್ಕೆ ಷರತ್ತುಗಳೇನು? ಫೆಡರಲ್ ಸರ್ಕಾರ-ಎಂದರೆ ಒಕ್ಕೂಟ ಸರ್ಕಾರ - ಅಸ್ತಿತ್ವಕ್ಕೆ ಬಂದ ನಂತರ ಒಕ್ಕೂಟದಿಂದ ಬೇರೆಯಾಗುವ ಅಧಿಕಾರವನ್ನು ಇವು ಬಯಸುತ್ತವೆಯೇ ? ಇದೇ ರೀತಿಯ ಇನ್ನೂ ಹಲವು ಪ್ರಶ್ನೆಗಳು ಉದ್ಭವಿಸಲಿವೆ ಹಾಗೂ ಈ ಸಮಸ್ಯೆಗಳು ಖಚಿತವಾದ ಉತ್ತರ ಬಯಸುತ್ತವೆ.

ಇವೆಲ್ಲವೂ ತುರ್ತಾಗಿ ಪರಿಹಾರವಾಗಬೇಕಾದ ಸಮಸ್ಯೆಗಳು. ಇಲ್ಲಿ ನಮ್ಮ ಚಿಂತನೆ ಸ್ವಚ್ಛವಾಗಿರಬೇಕು, ಸ್ಫುಟವಾಗಿರಬೇಕು. ಕ್ರಿಪ್ಸ್ ಯೋಜನೆಯು ದೇಶೀಯ ಸಂಸ್ಥಾನಗಳ ಕುರಿತು ಏನನ್ನೂ ಹೇಳಿಲ್ಲ. ಈ ಸಮಸ್ಯೆ ಅಂಗೀಕೃತವಾಗದಿರಲು ಇದೂ ಒಂದು ಕಾರಣ. ಲಾರ್ಡ್ ವೇವಲ್ ಇವರು ಆಕಾಶವಾಣಿಯ ಮೂಲಕ ತಮ್ಮ ಯೋಜನೆಯ ಪ್ರಚಾರಮಾಡುತ್ತ 'ರಾಜ್ಯಾಂಗ ರಚನಾ ಸಮ್ಮೇಳನದಲ್ಲಿ ಸಂಸ್ಥಾನದ ಪ್ರತಿನಿಧಿಗಳು ಭಾಗವಹಿಸಲಿದ್ದಾರೆ' ಎಂದಿದ್ದಾರೆ. ಸಂಸ್ಥಾನದ ಪ್ರತಿನಿಧಿಗಳು ಎಂದರೆ ಅರಸರ ಪ್ರತಿನಿಧಿಗಳೋ ಅಥವಾ ಪ್ರಜೆಗಳ ಪ್ರತಿನಿಧಿಗಳೋ ಎಂಬುದು ಸ್ಪಷ್ಟವಾಗಿಲ್ಲ. ಈಗ ವ್ಯರ್ಥ ಸಮಯ ಕಳೆಯಲು ಸಾಧ್ಯವಿಲ್ಲ. ಏಕೆಂದರೆ ಈ ಪ್ರಶ್ನೆಗಳು ತ್ವರಿತ ಉತ್ತರ ಬಯಸುತ್ತವೆ. ಸರ್ವತಂತ್ರ ಭಾರತದಲ್ಲಿ ಸಂಸ್ಥಾನಗಳು ಬೇಷರತ್ ಐಕ್ಯವಾಗಲು ಈ ಸಂಸ್ಥಾನಗಳ ಪ್ರಜೆಗಳು ಅಪೇಕ್ಷಿಸುತ್ತಾರೆ ಎಂಬುದು ಸುಸ್ಪಷ್ಟ. ವಿದೇಶದ ಸರ್ಕಾರದೊಡನೆ ಒಪ್ಪಂದ ಮಾಡಿಕೊಳ್ಳಲು ಬಯಸುವ ಅರಸರ ಅಧೀನವಾಗಿರಲು ಯಾವ ಪ್ರಜೆಯೂ ಬಯಸುವುದಿಲ್ಲ. ಅಖಂಡ ಭಾರತದ ಪ್ರಜಾಸಂಖ್ಯೆಯಲ್ಲಿ ಐದನೇ ಒಂದು ಭಾಗವಾಗಿ ಮತ್ತೂ ವಿಸ್ತೀರ್ಣದಲ್ಲಿ ನಾಲ್ಕನೇ ಒಂದು ಭಾಗವಾಗಿರುವ ಸಂಸ್ಥಾನಗಳು ಪ್ರತ್ಯೇಕವಾಗಿ ಉಳಿಯುವುದಾದರೆ ಸ್ವತಂತ್ರ ಭಾರತ ಎಂಬ ಪದವು ಅರ್ಥಹೀನವಾಗುತ್ತದೆ. ಇವೆಲ್ಲಕ್ಕೂ ಪ್ರಪ್ರಥಮವಾಗಿ ಆಗಬೇಕಾಗಿದ್ದೆಂದರೆ ಅಖಂಡ ಭಾರತದಿಂದ ಎಲ್ಲ ವಿದೇಶಿ ಹಿಡಿತಗಳೂ, ದೇಶಿಯ ಸಂಸ್ಥಾನಗಳ ಹಿಡಿತಗಳೂ ಸಂಪೂರ್ಣವಾಗಿ ಕಳಚಿ ಬೀಳಬೇಕಾಗಿವೆ.

ಆಗ ದೇಶಿಯ ಸಂಸ್ಥಾನಗಳ ಗತಿ ಏನು? ನಮ್ಮ ದೇಶದಲ್ಲಿ ಸುಮಾರು ೫೬೪ ಸಂಸ್ಥಾನಗಳಿವೆ. ಅವುಗಳ ವಿಸ್ತೀರ್ಣ, ಜನಸಂಖ್ಯೆ ಎಲ್ಲವೂ ವೈವಿಧ್ಯಮಯ ಹೈದರಾಬಾದಿನಂಥ ದೊಡ್ಡ ಸಂಸ್ಥಾನದಿಂದ ಹಿಡಿದು ಬಿಟಬಾರಿ ಸಂಸ್ಥಾನದಂಥ ಚಿಕ್ಕದರವರೆಗೆ ಅವು ಹಲವು ಬಗೆಯವು. ಇದೇ ರೀತಿಯಲ್ಲಿ ಅವುಗಳ ಆದಾಯವು ಕೂಡ. ಇವು ತಮ್ಮ ಸ್ವಾತಂತ್ರ್ಯವನ್ನು ಉಳಿಸಿಕೊಂಡು ಸಂಯುಕ್ತ ಭಾರತದೊಡನೆ ಐಕ್ಯವಾಗಲು ಸಾಧ್ಯವಿಲ್ಲ. ಸಣ್ಣ ಸಂಸ್ಥಾನಗಳೂ ದೊಡ್ಡ ಸಂಸ್ಥಾನಗಳೊಡನೆ ಐಕ್ಯವಾಗಬೇಕು ಅಥವಾ ನಾಮವಶೇಷವಾಗಬೇಕು. ಅದಿಲ್ಲವಾದಲ್ಲಿ ನೆರೆಯ ಬ್ರಿಟಿಷ್ ಪ್ರಾಂತ್ಯಗಳೊಡನೆ ಒಂದಾಗಬೇಕು.

ಐಕ್ಯತೆಯ ಮಾತು ಹೇಳುವಷ್ಟು ಸುಲಭವಲ್ಲ; ಅದು ತುಂಬ ಕಷ್ಟಕರವಾದುದು. ಐಕ್ಯತೆ ಬಗೆಹರಿಸಲಾಗದಷ್ಟು ಸಮಸ್ಯೆಗಳಿಂದ ಕೂಡಿದ್ದೂ ಕಾರ್ಯಗತವಾಗದು. ವಿಲೀನವಾದ ಈ ಸಂಸ್ಥಾನಗಳ ಆಡಳಿತ ಕೇಂದ್ರ ಎಲ್ಲಿರಬೇಕು, ಅಂತಿಮ ಅಧಿಕಾರ ಯಾರಿಗಿರಬೇಕು, ಆಯವ್ಯಯಗಳ ಹಂಚಿಕೆ ಹೇಗೆ, ಆಡಳಿತ ವರ್ಗದ ವರ್ಗಾವಣೆಯ ರೀತಿಯಾವುದು ಮುಂತಾದವು ಬಗೆಹರಿಸಬೇಕಾದ ಸಮಸ್ಯೆಗಳಲ್ಲಿ ಕೆಲವು. ಏನೋ ಒಂದು ರೀತಿಯಲ್ಲಿ ಕಾರ್ಯಸಾಗಲೆಂದು ಒಂದು ಬಗೆಯ ಒಡಂಬಡಿಕೆ ಮಾಡಿಕೊಂಡರೂ, ಅದನ್ನು ಕಾರ್ಯರೂಪಕ್ಕೆ ತರುವುದು ಬಹಳ ಕಷ್ಟ. ಆದ್ದರಿಂದ ಇಂಥ ಐಕ್ಯತೆ ಅಸಾಧ್ಯ ಎಂದೇ ನನಗೆ ತೋರುತ್ತದೆ. ಉಳಿದಿರುವುದು ಒಂದೇ ಮಾರ್ಗ. ಕೆಲವು ದೊಡ್ಡ ಸಂಸ್ಥಾನಗಳನ್ನು ಹೊರತು ಪಡಿಸಿ ಮಿಕ್ಕ ಸಂಸ್ಥಾನಗಳು ನಾಮಾವಶೇಷವಾಗುವುದೇ ಲೇಸು.

ಲೂಧಿಯಾನದಲ್ಲಿ ನೆರೆದ ಸಂಸ್ಥಾನಿ ಪ್ರಜೆಗಳ ಸಮ್ಮೇಳನದಲ್ಲಿ ಈ ವಿಷಯ ಚರ್ಚಿಸಲ್ಪಟ್ಟಿದೆ. ಅಂತೆಯೇ ಇಪ್ಪತ್ತು ಲಕ್ಷ ರೂಪಾಯಿಗಳ ವಾರ್ಷಿಕ ಆದಾಯವುಳ್ಳ ಜನಭರಿತ ಸಂಸ್ಥಾನಗಳು ಮಾತ್ರವೇ ಒಕ್ಕೂಟದಲ್ಲಿ ಐಕ್ಯವಾಗಲು ಅರ್ಹತೆ ಪಡೆಯುತ್ತವೆ. ಮಿಕ್ಕ ಸಂಸ್ಥಾನಗಳನ್ನು ವಜಾ ಮಾಡಲೇ ಬೇಕು. ಹಾಗೆ ಮಾಡದೆ ಬೇರೆ ಗತ್ಯಂತರವಿಲ್ಲ.

ಇನ್ನು ಉಳಿಯುವವು ೨೧ ದೊಡ್ಡ ಸಂಸ್ಥಾನಗಳು. ಅಖಂಡ ಭಾರತದ ಜನಹಿತ ದೃಷ್ಟಿಯಿಂದ ಈ ಸಂಸ್ಥಾನಗಳನ್ನು ಅನೂರ್ಜಿತಗೊಳಿಸಬಾರದು. ಈ ಸಂಸ್ಥಾನಗಳು ತಮ್ಮ ಪ್ರಜೆಗಳಿಗಾಗಲೀ, ಅಥವಾ ಭಾರತದ ಇತರ ಪ್ರಜೆಗಳಿಗಾಗಲೀ, ಸಂಸ್ಥಾನಗಳಾಗಿ ಮುಂದುವರೆದು ಏನೂ ಉಪಕಾರಮಾಡಲಾರವು. ದೊಡ್ಡ ವಿಭಾಗಗಳ ಪ್ರಜೆಗಳಾಗಿ ಜನರು ಇನ್ನೂ ಹೆಚ್ಚಿನ ಸುಖದಿಂದ ಬಾಳಬಲ್ಲರು. ಹಾಗೆ ನೋಡಿದರೆ ಬಹುತೇಕ ಸಂಸ್ಥಾನಗಳೂ ಜನತೆಯ ಸಂಸ್ಕೃತ ಹಾಗೂ ಸಾಮಾಜಿಕ ಐಕ್ಯತೆಗೆ ಮುಳುವಾಗಿವೆ. ಪ್ರಗತಿಗೆ ಅಡ್ಡಗಾಲುಹಾಕುತ್ತಿವೆ. ಕರ್ನಾಟಕವನ್ನು ಉದಾಹರಣೆಯಾಗಿ ತೆಗೆದುಕೊಳ್ಳಿ. ಮೈಸೂರು ಮತ್ತು ಹೈದರಾಬಾದ್ ಸೇರಿ ಕನ್ನಡ ಮಾತನಾಡುವ ಜನ ಈ ಎರಡು ದೊಡ್ಡ ಸಂಸ್ಥಾನಗಳಲ್ಲದೇ ಇನ್ನೂ ೧೮ ಸಂಸ್ಥಾನಗಳಲ್ಲಿ ಹರಿದು ಹಂಚಿ ಹೋಗಿದ್ದಾರೆ. ಈ ಎಲ್ಲ ಭಾಗಗಳನ್ನು ಒಂದುಗೂಡಿಸಿ ಒಂದು ದೊಡ್ಡ ಕರ್ನಾಟಕ ರಾಜ್ಯ ಸ್ಥಾಪಿಸುವುದರಿಂದ ಸಾಮಾಜಿಕ ಹಾಗೂ ಸಂಸ್ಕೃತಿಕವಾಗಿ ಈ ಜನರ ಪುರೋಭಿವೃದ್ಧಿ ಖಂಡಿತವಾಗಿ ಸುಗಮವಾದೀತು. ಸ್ವತಂತ್ರ ಭಾರತದಲ್ಲಿ ಭಾಷಾನುಗುಣ ರಾಜ್ಯಗಳು ಅಸ್ತಿತ್ವಕ್ಕೆ ಬರಬೇಕೆಂಬ ನಿರ್ಣಯವನ್ನು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಅಂಗೀಕರಿಸುತ್ತದೆ. ಭಾರತವು ಸ್ವತಂತ್ರವಾಗಿ ಕರ್ನಾಟಕ ರಾಜ್ಯವು ಸ್ಥಾಪಿತವಾದನಂತರ ಅಲ್ಲಿನ ಪ್ರಜೆಗಳ ಗತಿ ಏನು? ಸಣ್ಣ

ಂರಾಜ್ಯಗಳನ್ನು ವಜಾ ಮಾಡಿದರೂ ಏನೂ ಪ್ರಯೋಜನವಾಗದು. ಮೈಸೂರು ಕರ್ನಾಟಕದ ಒಂದು ದೊಡ್ಡ ಭಾಗವಾಗಿ ಉಳಿದೀತು. ಅಂತೆಯೇ ಹೈದರಾಬಾದಿನ ಕೆಲವು ಜಿಲ್ಲೆಗಳೂ ಕೂಡ. ಆದ್ದರಿಂದ ಅಖಂಡ ಭಾರತದ ಜನತೆಯ ಪ್ರಗತಿಗಾಗಿ ಸಂಸ್ಥಾನಗಳು ಕಣ್ಮರೆಯಾಗುವುದೇ ಸೂಕ್ತ. ಇದು ಅಗತ್ಯ ಕೂಡ.

ಈ ದಿಸೆಯಲ್ಲಿ ಸಂಸ್ಥಾನದ ಪ್ರಜೆಯಲ್ಲದೆ ರಾಜ ಮಹಾರಾಜರೂ ಸಹ ಅನುಪಮ ತ್ಯಾಗ ಮಾಡಬೇಕಾದೀತು. ಉಭಯತ್ರರೂ ತಮ್ಮ ವ್ಯಕ್ತಿತ್ವ, ಸ್ವಾಭಿಮಾನ, ಘನತೆ, ಗೌರವಗಳನ್ನು ಬಿಟ್ಟು ಕೊಡುವುದು ಅನಿವಾರ್ಯ. ಕೆಲವು ಸಂಸ್ಥಾನಗಳು ಪ್ರಗತಿ ಸಾಧಿಸಿರಬಹುದು. ಸಂಸ್ಥಾನದ ಭಾಗಗಳು ನೆರೆಯ ಪ್ರಾಂತ್ಯಗಳಲ್ಲಿ ಒಂದಾಗಲು ಅವಕಾಶ ಮಾಡಿಕೊಡಬೇಕು. ರಾಜರಿಗೆ ತಮಗೆ ಏನೋ ಅಧಿಕಾರವಿದೆ ಎಂಬ ಭ್ರಮೆ. ಇದರಿಂದ ಅವರು ಝಳಪಿಸುತ್ತಾರೆ. ಇವು ಹೋಗಬಹುದು. ಈ ಸುಳ್ಳು ಅಧಿಕಾರ ಗಳಿಸಲು ಅವರು ಮಾಡಬೇಕಾಗಿರುವ ತ್ಯಾಗ ಬಹಳ. ಅವರ ಪ್ರಜೆ ಪ್ರಾಂತ್ಯಗಳೊಡನೆ ಐಕ್ಯವಾಗಿ ಪಡೆಯುವ ಫಲಕ್ಕಿಂತ ಅಧಿಕ ಫಲ ಅರಸರು ನೀಡಬಲ್ಲರೇ? ಏನೋ ಈ ಪೊಳ್ಳು ಅಧಿಕಾರ ಉಳಿಸಿಕೊಳ್ಳುವುದಕ್ಕೋಸ್ಕರ, ಲಕ್ಷಾಂತರ ಜನರ ಪ್ರಗತಿಗೆ ಅಡ್ಡಿಯಾಗುವಂತೆ ಮಾಡಲು ತಮ್ಮ ಭ್ರಮಾಸ್ಪದ ಅಧಿಕಾರ ಉಳಿಸಿಕೊಳ್ಳಬೇಕೆ? ದೇಶದ ಹಿತವನ್ನು ಗಮನದಲ್ಲಿಟ್ಟುಕೊಂಡು, ಪ್ರಜೆಗಳ ಪ್ರಗತಿಗಾಗಿ ತಮ್ಮ ಸಂಸ್ಥಾನಗಳು ನೆರೆಯ ಪ್ರಾಂತ್ಯದೊಡನೆ ಐಕ್ಯವಾಗುವಂತೆ ಸಹಕರಿಸುವುದು ಅರಸರು ವ್ಯಕ್ತ ಪಡಿಸಬಹುದಾದ ದೇಶ ಭಕ್ತಿ, ಅಸದೃಶ ತ್ಯಾಗವೆಂದು ನಾನು ಪರಿಗಣಿಸುತ್ತೇನೆ. ಈ ರೀತಿಯ ಬಲಿದಾನದಿಂದ ಸಂಸ್ಥಾನದ ಪ್ರಜೆ, ನೆರೆಯ ಪ್ರಾಂತ್ಯದ ಜನರೊಡನೆ ಮಿಳಿತವಾಗಿ, ಐಕ್ಯವಾಗಿ ಅಪಾರ ಪ್ರಗತಿ ಸಾಧಿಸಲು ನೆರವಾಗದಂತೆ ಆಗುವುದಲ್ಲದೆ, ಸಂಸ್ಥಾನಗಳ ಭವಿಷ್ಯವನ್ನು ಒಂದೇ ಏಟಿಗೆ ಸಾಧಿಸಿದಂತೆ ಆಗುವುದರಲ್ಲಿ ಸಂದೇಹವಿಲ್ಲ. ಮುಂದೆ ಭಾಷಾನುಗುಣ ರಾಜ್ಯಗಳು ಅಸ್ತಿತ್ವಕ್ಕೆ ಬರಲು ಇದರಿಂದ ಖಂಡಿತ ಸಾಧ್ಯವಾಗುತ್ತದೆ.

ಆದರೆ ಈ ಉದ್ದೇಶ ಕೈಗೂಡಲೂ ಇನ್ನೂ ಬಹಳ ಕಾಲ ಬೇಕಾದೀತು. ಆದರೆ ತಾಳ್ಮೆ ಇಲ್ಲದ ರಾಜಕಾರಣಿಗೆ, ಅಷ್ಟು ಕಾಲ ಕಾದಿರಲು ಸಾಧ್ಯವಾಗದು. ಅವನಿಗೆ ಫಲ ಈಗಲೇ ಬೇಕು. ಬರೆಯಲು ರಾಜಕೀಯದಲ್ಲಿ ಶುಭ್ರವಾದ ಸ್ಲೇಟ್ ಇಲ್ಲ. ರಾಜೀ ಮಾಡಿಕೊಳ್ಳುವುದು ಅಗತ್ಯವಾಗುತ್ತದೆ. ಈ ದೊಡ್ಡ ಸಂಸ್ಥಾನಗಳೊಡನೆ ಕೆಲಕಾಲ ಬಾಳಬೇಕಾದುದು ಅಗತ್ಯವಾದೀತು. ಈ ಪರಿಸ್ಥಿತಿಯಲ್ಲಿ ದೊಡ್ಡ ಸಂಸ್ಥಾನಗಳು ಬಾಳಬೇಕಾದಲ್ಲಿ, ಬಾಹ್ಯ ಹಾಗೂ ಆಂತರಿಕ ಪರಿಸ್ಥಿತಿಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಸಂಸ್ಥಾನಗಳು ಇಂಗ್ಲೆಂಡಿನ ಹಾಗೂ ಇತರ ಯಾವುದೇ ವಿದೇಶಿ ರಾಷ್ಟ್ರಗಳ ಸಂಬಂಧ ತೊರೆಯಲೇ ಬೇಕಾಗುತ್ತದೆ. ನೆರೆಯ ಬ್ರಿಟಿಷ್ ಪ್ರಾಂತ್ಯಗಳೊಡನೆ ಸೇರಿಕೊಳ್ಳಬೇಕೆನ್ನುವದೂ ಸ್ಪಷ್ಟವಾಗಿಯೇ ಇದೆ. ನಿರುಪದ್ರವಿಯಾದ ಕೆಲವು ಹಕ್ಕುಗಳನ್ನು ಬಿಟ್ಟು, ಒಪ್ಪಂದಗಳು, ಕರಾರುಗಳು ಎಲ್ಲವನ್ನೂ ತೊರೆಯಬೇಕಾಗುತ್ತದೆ. ಸಂಯುಕ್ತ ಭಾರತದೊಡನೆ ಐಕ್ಯವಾಗುವುದರಿಂದ, ಹೀಗೆ ಲೀನವಾಗುವ ಸಂಸ್ಥಾನಕ್ಕೆ ಸಂಯುಕ್ತಾನಕ್ಕೆ ಲಭಿಸುವ ಹಕ್ಕು ಇವುಗಳಿಗೂ ಸಹಜವಾಗಿ ದೊರೆಯಲೇಬೇಕಾಗುತ್ತದೆ. ಪ್ರಜೆಗಳ ಹೊರತು ಅರಸನಿಗೆ ಒಪ್ಪಂದ ಮಾಡಿಕೊಳ್ಳುವ ಅಧಿಕಾರ ಹೇಗೆ ಲಭ್ಯವಾದೀತು. ಆದಕಾರಣ ಸಂಸ್ಥಾನವು ಈ ಸಂಸ್ಥಾನದ ಪ್ರಜಾಪ್ರತಿನಿಧಿಗಳಿಂದ ಪ್ರತಿನಿಧಿಸಲ್ಪಡುತ್ತದೆ. ಅಲ್ಲದೆ, ಈ ಕಾರಣದಿಂದ,

ತಾರ್ಕಿಕವಾಗಿ, ಸರ್ಕಾರವು ಜನರಿಂದ, ಜನರಿಗಾಗಿ, ಜನರ ಪ್ರತಿನಿಧಿಗಳಿಂದಲೇ, ಆಳಲ್ಪಡುವ ಸಂಸ್ಥಾನಗಳಾಗುತ್ತವೆ. ಪರಿಣಾಮವಾಗಿ ಪ್ರಜಾಪ್ರತಿನಿಧಿ ಎಂದರೆ ಪ್ರಜೆಗಳಿಂದ ಚುನಾಯಿಸಲ್ಪಡುವ ವ್ಯಕ್ತಿಯಾಗುತ್ತಾನೆಯೇ ವಿನಃ ಪ್ರಭುವಿನಿಂದ ನೇಮಿತನಾದವನು ಪ್ರಜೆಗಳ ಪ್ರತಿನಿಧಿ ಎನಿಸಿಕೊಳ್ಳಲಾರ.

ಈ ಬಗೆಯ ಧ್ಯೇಯ ಧೋರಣೆ ಪ್ರಜೆಗಳು ಹಾಗೂ ಅರಸರಲ್ಲಿ ಇರಬೇಕು. ಸಂಪ್ರದಾಯ, ಹಳೆಯ ಪದ್ಧತಿಗಳನ್ನು ಅನುಸರಿಸಿ ನಡೆಯುವುದು ಭಾರತೀಯರ ಸ್ವಭಾವ. ಈ ಗುಣ ಪ್ರಪಂಚದಲ್ಲಿ ಉಳಿದೆಲ್ಲೆಡೆಯೂ ಇರುತ್ತದೆ. ಆದ್ದರಿಂದ ಇದನ್ನು ಮಾನವ ಸ್ವಾಭಾವ ಎಂದೂ ಹೇಳಿದರೆ ತಪ್ಪಾಗಲಾರದು. 'ರಾಜಾ ಪ್ರತ್ಯಕ್ಷ ದೇವತಾ.' ರಾಜನು ವಿಷ್ಣುವಿನ ಅವತಾರವೆಂದು ಪೂಜಿಸುವುದುಂಟು. ಮಹಾರಾಜರ ವೈಭವೋಪೇತವಾದ, ರಂಗುರಂಗುಗಳ ಬೆಡಗಿನ ದರ್ಬಾರಿಗೆ ನಮ್ಮ ಮನ ಸೋಲುತ್ತದೆ. ಬಹುಶಃ ಹೀಗಾದುದೇ ಒಳ್ಳೆಯದೇನೊ. ದಿನಗಳೆದಂತೆ ಪರಿಸ್ಥಿತಿ ಬದಲಾಯಿಸುತ್ತದೆ. ಈ ಬದಲಾವಣೆಗೆ ನಾವು ಹೊಂದಿಕೊಳ್ಳಬೇಕು. ಹೀಗೆ ಹೊಂದಾಣಿಕೆ ಮಾಡಿಕೊಳ್ಳದಿದ್ದರೆ ಆಳುವವನಿಗೂ, ಆಳಿಸಿಕೊಳ್ಳುವವನಿಗೂ ಆಘಾತವೇ ಆದೀತು. ಅಧಿಕಾರದ ಸ್ಥಾನ ಹಾಗೂ ಅದರ ಪ್ರಭಾವವನ್ನು ಉಳಿಸಿಕೊಂಡು ಆಳರಸರು ತಮ್ಮ ಅಧಿಕಾರವನ್ನು ಪ್ರಜೆಗಳ ಕೈಗೆ ಒಪ್ಪಿಗೆ ಅವರ ಪ್ರೀತಿಗೆ ಪಾತ್ರರಾಗುವುದು ಶ್ರೇಯಸ್ಕರ. ಹೀಗೆ ಮಾಡಿದಲ್ಲಿ ಆಪತ್ಕಾಲ ಬಂದಾಗ ಪ್ರಜೆಯು ಅರಸನಿಗೆ ನೆರವಾಗುವುದರಲ್ಲಿ ಸಂದೇಹವಿಲ್ಲ.

ಈ ಸಂದರ್ಭದಲ್ಲಿ ರೇವಾ ಸಂಸ್ಥಾನದ ತರುಣ ಮಹಾರಾಜರಿಗೆ ನಾನು ಗೌರವ ಪೂರ್ವಕ ಆಭಾರವಂದನೆಯನ್ನು ಸಲ್ಲಿಸಲು ಬಯಸುತ್ತೇನೆ. ಅವರು ವಿಜಯದಶಮಿಯಂದು ತನ್ನ ಪ್ರಜೆಗಳಿಗೆ ವಯೋ ಆಧಾರಿತ ಪೂರ್ಣ ಜವಾಬ್ದಾರಿಯನ್ನು ಜಂಟಿ ಚುನಾವಣಾ ಪದ್ಧತಿಯ ಆಧಾರದ ಮೇಲೆ ಕೊಡವುದಾಗಿ ತನ್ನ ಭಾಷಣದಲ್ಲಿ ಹೇಳಿದ್ದಾರೆ. ಇದು ಮಹೋನ್ನತವಾದ ಉದಾರ ಸಾಧನೆ. ಈ ಕಾರ್ಯದಿಂದ ತರುಣ ಮಹಾರಾಜರು ತಮ್ಮ ಪ್ರಜೆಗಳ ಕೃಪೆಗೆ ಪಾತ್ರರಾಗಿರುವುದಲ್ಲದೇ ಅಖಂಡ ಭಾರತದ ಇಡೀ ಜನ ಸಮುದಾಯದ ಕೃತಜ್ಞತೆಗೂ ಪಾತ್ರರಾಗಿದ್ದಾರೆ. ನೀವೂ ಸಹ ಅವರಿಗೆ ಕೃತಜ್ಞತೆ ಸಲ್ಲಿಸುವಿರೆಂದು ನಂಬಿದ್ದೇನೆ. ವಯಸ್ಸಿನಲ್ಲಿ ಕಿರಿಯರಾದರೂ ಬುದ್ಧಿಯಲ್ಲಿ ಹಿರಿಯರಾದ ಈ ಯುವಕ ಇತರ ಎಲ್ಲ ಅರಸರಿಗೂ ಮೇಲ್ಪಂಕ್ತಿಯಾಗಿದ್ದಾರೆ. ಇತರ ಅರಸರೂ ತಮ್ಮ ಹಾಗೂ ತಮ್ಮ ಪ್ರಜೆಗಳ ಹಿತಕ್ಕಾಗಿ ಮಾಡಬಹುದಾದ ಅಲ್ಪ ಕರ್ತವ್ಯವೆಂದರೆ ರೇವಾ ಸಂಸ್ಥಾನದ ಅರಸರ ಮೇಲ್ಪಂಕ್ತಿಯನ್ನು ಅನುಸರಿಸುವುದೇ ಆಗಿದೆ. ಜವಾಬ್ದಾರಿ ಸರ್ಕಾರವಿಲ್ಲದ ಯಾವ ಸಂಸ್ಥಾನವೂ ಉಳಿಯಲು ಸಾಧ್ಯವಿಲ್ಲ ಯಾವುದೇ ಸಂಸ್ಥಾನದ ಅರಸ ಜವಾಬ್ದಾರಿ ಸರ್ಕಾರ ಸ್ಥಾಪಿಸಲು ಬಯಸದಿದ್ದಲ್ಲಿ ಅವನು ಮತ್ತು ಅವನ ರಾಜ್ಯ ಎರಡೂ ಕೊಚ್ಚಿ ಹೋದಾವು. ಅಲ್ಲದೇ ಸ್ವಯಂ ಆಡಳಿತದ ನೆರೆಯ ಪ್ರಾಂತ್ಯದೊಡನೆ ಸೇರಿಹೋಗಲೂ ಬಹುದು.

ನನ್ನ ವಾಕ್ಯಗಳು ಆಳರಸರಿಗೆ ಅಪ್ರಿಯವೆನಿಸಬಹುದು. ನಾನು ಉದ್ದೇಶಪೂರ್ವಕವಾಗಿಯೇ ಸ್ವಲ್ಪ ಕಟುವಾಗಿ ಮಾತನಾಡಿರುವೆ. ಈಗಿನ ಗಂಭೀರ ಸನ್ನಿವೇಶವನ್ನು ಈ ಅರಸರು ಅರ್ಥಮಾಡಿಕೊಳ್ಳಲಿ ಎಂಬ ಉದ್ದೇಶದಿಂದಲೇ ಕಟುವಾದ ವಾಕ್ಯಗಳನ್ನು ಬಳಸಿದ್ದೇನೆ. ಬ್ರಿಟಿಷ್ ಪ್ರಭುತ್ವ ಮತ್ತು ತಮ್ಮ ಸಲಹೆಗಾರರ ಬುದ್ಧಿ ಸಾಮರ್ಥ್ಯಗಳು ತಮ್ಮ ರಕ್ಷಣೆಗೆ ಬರಬಹುದು

ಮತ್ತು ತಾವು ಎಂದಿನಂತೆ ನಿರಂಕುಶಾಧಿಕಾರಿಗಳಾಗಿ ಬಾಳಬಹುದು ಎಂದು ಈ ಅರಸರು ಭಾವಿಸಿರಬಹುದು. ಫ್ಯಾಸಿಸಂ ವಿರುದ್ಧ ಯಾವ ಬ್ರಿಟನ್ ಹೋರಾಡಿತೋ ಅದೇ ಪ್ರಭುತ್ವ ಈ ರಾಜಮಹಾರಾಜರು ನಿರಂಕುಶಾಧಿಕಾರಿಗಳಾಗಿ ವರ್ತಿಸಲು ಯಾವ ಮೋರೆ ಇಟ್ಟುಕೊಂಡು ಒಪ್ಪೀತು? ಇಂಗ್ಲೆಂಡ್ ಭಾರತಕ್ಕೆ ಇಷ್ಟರಲ್ಲೇ ಸಂಪೂರ್ಣ ಸ್ವಾತಂತ್ರ್ಯ ಮತ್ತು ಹೊಣೆಗಾರಿಕೆ ಕೊಡುವ ಭರವಸೆ ನೀಡಿರುತ್ತದೆ. ಈ ಭರವಸೆಗೆ ವಿರುದ್ಧ ಸಂಸ್ಥಾನಾಧೀಶರು ನಿರಂಕುಶ ಮತಿಗಳಾಗಿ ನಡೆದುಕೊಳ್ಳುವಂತೆ ಹೇಳಲು ಇಂಗ್ಲೆಂಡ್‌ಗೆ ಹೇಗೆ ಸಾಧ್ಯವಾದೀತು? ಇಂಗ್ಲೆಂಡ್ ತಾನಿತ್ತಿರುವ ಭರವಸೆಗಳನ್ನು ಮರೆತು, ಅಲ್ಲದೇ ಪ್ರಪಂಚದ ಅಭಿಪ್ರಾಯವನ್ನು ಕಡೆಗಣಿಸಿ ಈ ಸಂಸ್ಥಾನಾಧೀಶರು ತಮ್ಮ ಮನಬಂದಂತೆ ವರ್ತಿಸಲು ಅವಕಾಶ ಮಾಡಿಕೊಟ್ಟಲ್ಲಿ ಆಗುವ ಪರಿಣಾಮ ಘೋರ: ಸಂಸ್ಥಾನಾಧೀಶರು ನಡೆಸುವ ಗುಲಾಮಗಿರಿ, ಪ್ರಜೆಗಳ ಪ್ರಗತಿಗೆ ಕಂಟಕ, ನಿರಂತರ ಹೊಡೆದಾಟ, ಬಡಿದಾಟ, ಅಶಾಂತಿ, ಆದಕಾರಣ ಸಂಸ್ಥಾನಾಧೀಶರಿಗೆ ಇಂಗ್ಲೆಂಡ್ ಸಹಾಯ ಮಾಡುವುದೆಂದು ತಿಳಿಯುವುದು ಕೇವಲ ಮೂರ್ಖತನ. ಇವರ ಸಲಹೆಗಾರರು ಇವರಿಗೆ ನೀಡಬಹುದಾದ ಸಲಹೆ ಹಾಗೂ ಹಿತೋಕ್ತಿಯೆಂದರೆ ಇವರ ಪ್ರಜೆಗಳು ಸುಖ ಸಂತೋಷದಿಂದ ಬಾಳುವಂತೆ ಸಲಹೆ ಮಾಡುವುದೇ ಆಗಿರುತ್ತಸೆ. ಅತೃಪ್ತ ಜನ ಅಪಾಯಕಾರಿಗಳು. ಸಂಸ್ಥಾನಾಧೀಶರ ಹಿತೈಷಿಯಾಗಿ ಹಾಗೂ ಶಾಂತಿ ಮತ್ತು ಪ್ರಗತಿಗಳ ದೃಷ್ಟಿಯಿಂದ ನಾನು 'ದೊಡ್ಡ ಸಂಸ್ಥಾನಗಳ ರಾಜರು ತಮ್ಮ ಸಂಸ್ಥಾನಗಳಲ್ಲಿ ತಡಮಾಡದೇ ಜವಾಬ್ದಾರಿ ಸರ್ಕಾರ ಸ್ಥಾಪಿಸಿ ನೆರೆಯ ರಾಜ್ಯಗಳೊಡನೆ ಒಂದಾಗಲು ಸಿದ್ಧರಾಗಬೇಕು' ಎಂದು ಹೇಳ ಬಯಸುತ್ತೇನೆ. ವೈಸರಾಯರೊಡನೆ ವಿಚಾರವಿನಿಮಯಕ್ಕಾಗಿ ಜನರ ಪ್ರತಿನಿಧಿಗಳನ್ನು ಕಳುಹಿಸಿಕೊಡಬೇಕೆಂಬ ಸಲಹೆ ನನ್ನದು. ರಾಜ್ಯಾಂಗ ರಚನಾ ಸಭೆಯಲ್ಲಿ ಜನರಿಂದ ಚುನಾಯಿಸಲ್ಪಟ್ಟ ಜನತಾ ಪ್ರತಿನಿಧಿಗಳು ಭಾಗವಹಿಸುವುದು ಅತ್ಯಗತ್ಯ.

ಕಾಲ ಅತಿ ತೀಕ್ಷಣವಾಗಿದೆ, ಉಗ್ರವಾಗಿದೆ. ತಪ್ಪು ಹೆಜ್ಜೆ ಇಟ್ಟುದೇ ಆದರ ಅದನ್ನು ಸರಿಪಡಿಸಲು ಯಾವ ಸಂಸ್ಥಾನಾಧೀಶನಿಂದಲೂ ಸಾಧ್ಯವಾಗದು. ಸಕಲರ ಹಿತದೃಷ್ಟಿಯಿಂದ ಸಂಸ್ಥಾನಗಳ ಪ್ರಜೆಗಳ ಕರ್ತವ್ಯವೇನೆಂದು ವಿವರಿಸುವುದು ಅನವಶ್ಯಕ, ಅದು ಸ್ವಯಂ ವೇದ್ಯ. ಇದಕ್ಕೆ ಕಿವಿಗೊಟ್ಟರೆ ಸಂಸ್ಥಾನಾಧೀಶ ಹಾಗೂ ಪ್ರಜೆ ಇಬ್ಬರಿಗೂ ಅನುಕೂಲ. ಅಳರಸರು ಈ ಹಿತ ನುಡಿಗ ಕಿವಿಗೊಡದಿದ್ದರೆ ನನಗೇನೂ ಬಾಧಕವಿಲ್ಲ. ಕಾರಣ ಸಮಸ್ಯೆ ಬಗೆಹರಿಸಲು ಅವರು ತುಂಬ ಸಹಾಯ ಮಾಡಿದಂತೆ ಆದೀತು ಅಷ್ಟೇ!

ಕೇಂದ್ರದಲ್ಲಿ ಹಾಗೂ ಪ್ರಾಂತ್ಯಗಳಲ್ಲಿ ರಾಜಕೀಯ ಅಧಿಕಾರಗಳಿಸಿಕೊಂಡು ದೇಶೀಯ ಸಂಸ್ಥಾನಗಳ ಗೋಜಿಗೆ ಹೋಗದೆ ಇರುವುದೇ ಒಳಿತೆಂಬ ಕಾಲವೊಂದಿತ್ತು. ತಾವು ಸ್ವಾತಂತ್ರ್ಯಗಳಿಸಿದ ತರುವಾಯ ದೇಶಿ ಸಂಸ್ಥಾನಗಳ ಸಮಸ್ಯೆಯನ್ನು ಮತ್ತಷ್ಟು ಸುಲಭವಾಗಿ, ಉಪಯುಕ್ತವಾಗಿ, ಶೀಘ್ರವಾಗಿ ಬಗೆಹರಿಸಬಹುದೆಂಬ ಕಲ್ಪನೆ ಬ್ರಿಟಿಷ್ ಇಂಡಿಯಾದ ರಾಜಕೀಯದಲ್ಲಿತ್ತು. ಈ ಭಾವನೆ ಈಗ ಬದಲಾವಣೆ ಹೊಂದಿದಂತೆ ತೋರುತ್ತದೆ. ಹರಿಪುರ ಅಧಿವೇಶನ ಸ್ವೀಕರಿಸಿದ ನಿರ್ಣಯದ ನಂತರ ಸಂಸ್ಥಾನದ ಪ್ರಜೆ ಮತ್ತು ಬ್ರಿಟಿಷ್ ಭಾರತದ ಪ್ರಜೆಗಳ ನಡುವೆ ಭಿನ್ನತೆ ತಲೆದೋರುವಂತೆ ಕಾಣುತ್ತದೆ. ಕಾಲ ಕ್ರಮೇಣ ಈ ಭಿನ್ನತೆ ಮತ್ತಷ್ಟು ಅಧಿಕವಾಗಬಹುದು. ಬ್ರಿಟಿಷ್ ಪ್ರಭುತ್ವವು ಸಂಸ್ಥಾನಗಳಿಗೆ ಸ್ವಲ್ಪ ಅನುಕೂಲ ಮಾಡಿಕೊಟ್ಟು ಈ ಭಿನ್ನತೆ ಶಾಶ್ವತವಾಗಿ ಉಳಿಯುವಂತೆ ಮಾಡಲೂ ಬಹುದು. ಸಂಸ್ಥಾನಾಧೀಶರ ಮತ್ತು ಪ್ರಜೆಗಳ

ನಡುವಿನ ಕಂದಕವನ್ನು ಮತ್ತಷ್ಟು ಆಳವಾಗಿ ಮಾಡಬಹುದು. ಒಪ್ಪಂದಗಳು, ಕರಾರುಗಳು ಸಂಸ್ಥಾನ ಮತ್ತು ಪ್ರಾಂತ್ಯಗಳ ಒಡಕಿಗೆ ಕಾರಣವಾಗಬಹುದು. ತಮ್ಮ ಪ್ರಜೆಗಳ ಬೆಂಬಲ ಪಡೆದು ಈ ಸಂಸ್ಥಾನಾಧೀಶರು ತಮ್ಮ ಅಧಿಕಾರ ಹಾಗು ಗೌರವ ಉಳಿಸಿಕೊಳ್ಳಲು ಪ್ರಯತ್ನಮಾಡಿಯಾರು. ಇವೆಲ್ಲವೂ ಇನ್ನೂ ಶೈಶವಾವಸ್ಥೆಯಲ್ಲಿಯೇ ಇವೆ. ಈಗಲೇ ಇವನ್ನೆಲ್ಲ ಸರಿಪಡಿಸಿಕೊಳ್ಳಬೇಕು. ಹಾಗೆಯೇ ಬಿಟ್ಟರೆ ರಾಜಕೀಯ ಕ್ಷೇತ್ರದಲ್ಲಿ ಭಿನ್ನತೆ ಮತ್ತಷ್ಟು ಉಗ್ರವಾಗಬಹುದು.

ಆದಕಾರಣ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಭಾರತದ ಪ್ರಾಂತ್ಯಗಳಲ್ಲೂ ಮತ್ತು ಸಂಸ್ಥಾನಗಳಲ್ಲೂ ಏಕರೀತಿಯಾಗಿ ವರ್ತಿಸಬೇಕೆಂಬ ಅಭಿಮತ ಬಲವಾಗುತ್ತಿದೆ. ಹರಿಪುರ ಅಧಿವೇಶನದ ಪರಿಣಾಮ ಕೆಲವು ದೊಡ್ಡ ಸಂಸ್ಥಾನಗಳು ವೈಯಕ್ತಿಕವಾಗಿ ತಮ್ಮದೇ ಆದ ಸ್ವತಂತ್ರ ಸಂಸ್ಥೆಗಳನ್ನು ಸ್ಥಾಪಿಸಿಕೊಳ್ಳಲು ಸಹಾಯ ಮಾಡಿದಂತೆ ಆಗಿರುತ್ತದೆ. ಬ್ರಿಟಿಷ್ ಪ್ರಾಂತ್ಯಗಳ ರಾಜಕೀಯ ಧುರೀಣರು, ದೇಶೀಯ ಸಂಸ್ಥಾನಗಳ ಅರಸರು ತಮ್ಮ ಪ್ರಜೆಗಳಿಗೆ ಸ್ವಾತಂತ್ರ್ಯ ನೀಡದೆ, ಸಂಸ್ಥಾನಾಧೀಶರನ್ನು ಬ್ರಿಟಿಷ್ ಪ್ರಭುತ್ವದ ಕಪಿಮುಷ್ಟಿಯಿಂದ ಪಾರುಮಾಡದೆ ಅಖಂಡ ಸ್ವತಂತ್ರ ಹಿಂದುಸ್ಥಾನದ ಸಂವಿಧಾನ ರಚಿಸಲಾರರು. ಅಖಿಲ ಭಾರತ ಕಾಂಗ್ರೆಸ್ಸಿನ ಮಾರ್ಗದರ್ಶನದಲ್ಲಿ, ನೇತೃತ್ವದಲ್ಲಿ ದೇಶೀಯ ಸಂಸ್ಥಾನಗಳ ಪ್ರಜೆ ಇನ್ನೂ ಅಧಿಕ ಸಾಮರ್ಥ್ಯದಿಂದ ಪ್ರಭಾವಯುತ ಹೋರಾಟ ನಡೆಸಬೇಕಾದೀತು. ಕಾಂಗ್ರೆಸ್ ಹಾಗೂ ಭಾರತ ದೇಶವು ಐಕ್ಯತೆ, ಐಕ್ಯ ಕರ್ತವ್ಯ ನಿರ್ವಹಣೆಯಿಂದ ಲಾಭ ಗಳಿಸುವುದರಲ್ಲಿ ಸಂದೇಹವಿಲ್ಲ.

ಈ ಪ್ರಶ್ನೆಗಳಿಗೆ, ಸಮಸ್ಯೆಗಳಿಗೆ ಗಮನಹರಿಸಿ ತಮ್ಮ ಚಿಂತನೆ ಸ್ಪಷ್ಟಪಡಿಸಿಕೊಂಡು, ವಿಶದೀಕರಿಸಿಕೊಂಡು, ಸಂಸ್ಥಾನಾಧೀಶರಿಗೂ, ಪ್ರಜೆಗಳಿಗೂ ಸೂಕ್ತ ಮಾರ್ಗದರ್ಶನ ನೀಡುವರೆಂದು ನಾನು ಆಶಿಸುತ್ತೇನೆ. ತನ್ನ ಆಡಳಿತದಲ್ಲಿ ಕೊಚ್ಚಿಯು ತುಸು ಪ್ರಮಾಣದಲ್ಲಿ ಜವಾಬ್ದಾರಿ ಸರ್ಕಾರ ನೀಡಿದ ಮೊದಲ ಸಂಸ್ಥಾನವೆಂದು ಭಾವಿಸುತ್ತೇನೆ. ಇದಕ್ಕಾಗಿ ನಿಮಗೆ ವಂದನೆ. ತನ್ನ ಪ್ರಜೆಗೆ ತಕ್ಕ ಮಟ್ಟಿನ ಸ್ವಾತಂತ್ರ್ಯ ನೀಡಿರುತ್ತದೆ. ಅಷ್ಟುಮಟ್ಟಿನ ಸ್ವಾತಂತ್ರ್ಯ ನೀವು ಗಳಿಸಿರುತ್ತೀರಿ. ಇದಕ್ಕಾಗಿ ನೀವು ವಂದನಾರ್ಹರು. ಈ ಬಗೆಯ ಆಡಳಿತದ ಅನುಭವ ನಿಮಗೆ ಪ್ರಾಪ್ತವಾಗಿದೆ. ಇದರಿಂದ ನಾವು ತೃಪ್ತರಾಗಿಲ್ಲ, ನೀವೂ ಸಂತುಷ್ಟರಾಗಿರಲಾರಿರಿ. ನಮ್ಮ ಧ್ಯೇಯ ಧೋರಣೆ ಮಹೋನ್ನತ ಏನೋ ಅಷ್ಟು ಇಷ್ಟು ಆಡಳಿತದಲ್ಲಿ ಭಾಗವಹಿಸಲು ಅವಕಾಶ ನೀಡಿರುವುದರಿಂದ ನಾವು ತೃಪ್ತರಾಗಲಾರೆವು. ನಾವು ಇನ್ನೂ ದೊಡ್ಡ ಇನ್ನೂ ಉನ್ನತವೂ ಶ್ರೇಷ್ಟವೂ ಆದ ಧ್ಯೇಯಗಳಿಗೆ ಹೋರಾಡಬೇಕಾಗಿದೆ.

ನಮ್ಮ ಧ್ಯೇಯ ಕೇವಲ ಸ್ವರಾಜ್ಯವಲ್ಲ, ಸ್ವತಂತ್ರ ಭಾರತದ ಸ್ಥಾಪನೆಯಲ್ಲ, ವಿಶ್ವಶಾಂತಿ ಮತ್ತು ಪ್ರಗತಿ ಮಾತ್ರವಲ್ಲ, ಆದರೆ ಮೂಕ ಪ್ರಾಣಿಗಳನ್ನು ಸೇರಿಸಿಕೊಂಡಂತೆ ಮಹೋನ್ನತ ಸುಖ ಗಳಿಸಿ ಕೊಡುವುದೇ ಆಗಿದೆ. ಬದುಕಿಗೆ ಅಗತ್ಯವಾದ ಎಲ್ಲ ಅವಶ್ಯಕತೆಗಳನ್ನು ಹೆಚ್ಚು ಪ್ರಯತ್ನವಿಲ್ಲದೆ, ಸುಲಭವಾಗಿ ಗಳಿಸಿಕೊಂಡು ತಕ್ಕಮಟ್ಟಿನ ಸುಖ ಜೀವನ ನಡೆಸುವಂತಾಗಲೂ

ನಾವು ಬದುಕಿ ಬಾಳಬೇಕು. ನಿಸ್ವಾರ್ಥ ಜೀವನ, ಸಾರ್ಥಕ ಜೀವನ ನಮ್ಮ ನಿಮ್ಮ ಧ್ಯೇಯವಾಗಿರಲಿ. ಇದು ಮಹೋನ್ನತ ಧ್ಯೇಯವೇ ಸರಿ. ಆದರೆ ಎಟಕಲಾಗದ ಆಕಾಶ ಕುಸುಮವು ಖಂಡಿತಕ್ಕೂ ಅಲ್ಲ. ಇದು ಉನ್ನತರಾದ ಹಿರಿಯ ಜೀವಿಗಳಿಗೆ ಯೋಗ್ಯವಾದ ಧ್ಯೇಯ. ಮನಸ್ಸು ಮಾಡಿದರೆ ಈ ಧ್ಯೇಯವನ್ನು ಸಾಧಿಸಿಯೇ ಸಾಧಿಸುತ್ತೇವೆ. ಇದರಲ್ಲಿ ನನಗೆ ತಿಲಮಾತ್ರವೂ ಸಂದೇಹವಿಲ್ಲ.

ಈ ಧ್ಯೇಯ ಸಾಧಿಸುವ ಮನಸ್ಸು ಉತ್ಸಾಹ ನನ್ನ ಸುತ್ತಲೂ ಕಾಣಬರುತ್ತಿದೆ. ಈ ಉತ್ಸಾಹವನ್ನು ಸರಿಯಾದ ಮಾರ್ಗದಲ್ಲಿ ಪ್ರವಹಿಸುವಂತೆ ಮಾಡಬೇಕು. ಈ ಪ್ರಯತ್ನದಲ್ಲಿ ನೀವು ತೊಡಗಿರುವುದು ವ್ಯಕ್ತವಾಗುತ್ತಿದೆ. ಮಾನವನ ಆತ್ಮ ಗೌರವ, ಸುಖ, ಶಾಂತಿ, ಸಮೃದ್ಧತೆಯ ಪವಿತ್ರ ಮಹೋನ್ನತ ಧ್ಯೇಯ ಕೈಗೂಡಲೆಂದು ಆಶಿಸುತ್ತೇನೆ. ತಾವು ನಿಸ್ವಾರ್ಥ ತ್ಯಾಗ ಮಾಡಲು ಅಣಿಯಾಗುತ್ತಿರುವುದು ವೇದ್ಯವಾಗುತ್ತಿದೆ. ಇದಕ್ಕಿಂತ ಹೆಚ್ಚಿನದನ್ನು ನಾನು ನಿರೀಕ್ಷಿಸಲಾರೆ. ಈ ಸ್ತುತ್ಯ ಕಾರ್ಯದಲ್ಲಿ ಜಯವಾಗಲೆಂದು ಹಾರೈಸುತ್ತೇನೆ. ಕೊಚ್ಚಿಯ ರಾಜ್ಯ ಪ್ರಜಾಮಂಡಲಿಯ ಸಮ್ಮೇಳನ ಉದ್ಘಾಟಿಸಲು ನನಗೆ ನೀಡಿದ ಅವಕಾಶಕ್ಕಾಗಿ ನಿಮ್ಮೆಲ್ಲರಿಗೂ ನಾನು ಆಭಾರಿ. ನಿಮ್ಮ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ಈ ಸಮ್ಮೇಳನ ಯಶಸ್ವಿಯಾಗಲಿ.

ವಂದೇ ಮಾತರಂ.

## ಭಾಗ - 4

# ನಿಕಟವರ್ತಿಗಳ ಅನಿಸಿಕೆಗಳು

೧) **ಶ್ರೀ ಎಂ. ಎನ್. ಜೋಯಿಸ್, ಮೈಸೂರು** (ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ಹಾಗೂ ಸ್ವತಂತ್ರ ಮೈಸೂರಿನ ಪ್ರಸಿದ್ಧ ರಾಜಕಾರಣಿ, ಶ್ರೀ ಜೋಯಿಸ್ ಅವರು ಭಾಷ್ಯಂ ಅವರ ಅತ್ಯಂತ ಹತ್ತಿರದಿಂದ ಬಲ್ಲ ಆ ದಿನಗಳ ಕಾಂಗ್ರೆಸ್ಸಿಗರಲ್ಲಿ ಒಬ್ಬರು. ಅವರನ್ನು ಜುಲೈ ೧೯೯೯ರಲ್ಲಿ ಈ ಲೇಖಕ ಪುಸ್ತಕ ಬರೆಯಲೆಂದು ಸಂದರ್ಶಿಸಿದಾಗ ಅವರು ನೀಡಿದ ಧೀರ್ಘ ಸಂದರ್ಶನದಿಂದ ಆಯ್ದುಕೊಂಡ ಭಾಷ್ಯಂ ಕುರಿತಾದ ಕೆಲವು ವಿಚಾರಗಳನ್ನು ಇಲ್ಲಿ ಸಂಪಾದಿಸಿ, ಭಾಷಾಂತರಿಸಿ ಕೊಡಲಾಗಿದೆ.)

"ನಾನು ಕೆ. ಟಿ. ಭಾಷ್ಯಂ ಅವರನ್ನು ಮೊದಲ ಬಾರಿಗೆ ಭೇಟ್ಟಿಯಾಗಿದ್ದು ಸುಮಾರು ೧೯೨೩-೨೪ರಲ್ಲಿ ಇರಬೇಕು. ಆಗ ನಾನು ಮೈಸೂರು ಕಾಂಗ್ರೆಸ್ಸಿಗೆ ಹೊಸದಾಗಿ ಸದಸ್ಯನಾಗಿದ್ದೆ. ಮತ್ತೊಬ್ಬ ಕಾಂಗ್ರೆಸ್ಸಿಗರಾದ ವಿ. ಎಸ್. ನಾರಾಯಣ ರಾವ್ ಅವರ, ಬಳೆಪೇಟೆಯಲ್ಲಿದ್ದ, 'ಇಂಡಿಯನ್ ಪ್ರೆಸ್' ನಲ್ಲಿ ಭಾಷ್ಯಂರವರನ್ನು ಮೊದಲ ಬಾರಿಗೆ ಭೇಟಿಯಾದೆ. ಅಂದಿನ ಭೇಟಿ ಕೆಲವೇ ದಿನಗಳಲ್ಲಿ ಹತ್ತಿರದ ಸ್ನೇಹಕ್ಕೆ ದಾರಿಮಾಡಿಕೊಟ್ಟಿತು. ಆಗ ಲೇಬರ್ ಲೀಡರ್ ಆಗಿದ್ದ ಭಾಷ್ಯಂ ಅವರು ತಮಿಳು ಹಾಗೂ ಇಂಗ್ಲಿಷ್ ನಲ್ಲಿಯೇ ಹೆಚ್ಚು ಮಾತಾಡುವವರು. ಮೈಸೂರು ಕಾಂಗ್ರೆಸ್ಸಿನಲ್ಲಿ ಭಾಷ್ಯಂ ಅವರಿಗೆ ತುಂಬಾ ಪ್ರಭಾವವಿತ್ತು. ಅವರು ಒಳ್ಳೆಯ ಭಾಷಣಕಾರರು. ಭಾಷ್ಯಂ ಅಯ್ಯಂಗಾರರ ಭಾಷಣ ಎಂದು ಗೊತ್ತಾದರೆ ಸಾಕು, ಸಾವಿರಾರು ಜನ ಸೇರಿಬಿಡುತ್ತಿದ್ದರು. ಆ ಸಮಯದಲ್ಲಿ ಅವರು ಭಾಷಣಕ್ಕೆಂದು ಮೈಸೂರಿಗೆ ಬಂದಾಗಲೆಲ್ಲ ನನ್ನ ಅವರ ಭೇಟಿಯಾಗುತ್ತಿತ್ತು.

ಸುಮಾರು ೧೯೨೯ರಲ್ಲೋ ೧೯೩೦ರಲ್ಲೋ ನಾಗಪುರದಲ್ಲಿ ನಡೆದ ಕಾಂಗ್ರೆಸ್ಸಿನ ಭಾರತೀಯ ಸ್ವಾತಂತ್ರ್ಯ ಸತ್ಯಾಗ್ರಹಿಗಳ ರಾಷ್ಟ್ರೀಯ ಸಭೆಗೆ ಕೆ. ಟಿ. ಭಾಶ್ಯಂ ಹೋಗಬೇಕಾಗಿತ್ತು; ಆದರೆ ಸಭೆಯಲ್ಲಿ ಕೆಲವು ಬೇರೆ-ಬೇರೆ ಅಪಸ್ವರಗಳು ಎದ್ದಿದ್ದರಿಂದ ಭಾಷ್ಯಂ ಕೊನೆ ಘಳಿಗೆಯಲ್ಲಿ ತಾವು ನಾಗಪುರಕ್ಕೆ ಹೋಗುವುದಿಲ್ಲ ಎಂದು ನಿರ್ಧರಿಸಿದರು. ಯಾವುದೇ ಕಾರಣಕ್ಕೂ ಕಾಂಗ್ರೆಸ್ಸಿನಲ್ಲಿ ಒಡಕು ಬರಲೇಬಾರದೆಂಬ ವಿಚಾರದಿಂದ ತಾವು ಹಾಗೆ ಮಾಡಿದ್ದಾಗಿ ಅವರು ನಂತರ ತಿಳಿಸಿದರು.

ಭಾಷ್ಯಂ ಅಯ್ಯಂಗಾರ್ ಅವರಿಗೆ ಕಾರ್ಮಿಕರ ಮತ್ತು ಕಾರ್ಮಿಕ ಸಂಘಟನೆಗಳ ಜೊತೆಗೆ ಅತ್ಯಂತ ನಿಕಟವಾದ ಸಂಬಂಧವಿತ್ತೆನ್ನುವುದು ಅವರನ್ನು ಬಲ್ಲ ಎಲ್ಲರಿಗೂ ತಿಳಿದ ವಿಷಯವೆ ಸರಿ. ಅವರು ಕಾರ್ಮಿಕರನ್ನು ನೋಡಿಕೊಳ್ಳುವ ರೀತಿ ನಿಜಕ್ಕೂ ಮೆಚ್ಚಿಕೊಳ್ಳಬೇಕಾದದ್ದೇ ಸರಿ. ಕೆಲಸಗಾರರಲ್ಲಿ ಅವರು ಯಾವ ಭಿನ್ನಾಭಿಪ್ರಾಯ, ತಾರತಮ್ಯತೆಗಳೂ ಬೆಳೆಯದಂತೆ ಎಲ್ಲರೂ ಸೇರಿ ಸುಖವಾಗಿರುವಂತೆ ಹರಸಿ ಬೀಳ್ ಕೊಡುವಂತೆ ಹೇಳುತ್ತಿದ್ದರು.

ನಾನು ಮತ್ತು ಭಾಷ್ಯಂ ಅಯ್ಯಂಗಾರ್ ಶಿವಮೊಗ್ಗಾ ಜೇಲಿನಲ್ಲಿ ಒಟ್ಟಾಗಿ ಇದ್ದ ಸಮಯ. ನಮ್ಮ ಜೊತೆಗೆ ರಂಗರಾಮಯ್ಯನವರೂ ಇದ್ದರು. ಭಾಷ್ಯಂ ಜಾತಿವಾದಿ ಅಲ್ಲದಿದ್ದರೂ ವೈಷ್ಣವ ಸಂಪ್ರದಾಯದಲ್ಲಿ ನಿಷ್ಠೆ ಇಟ್ಟವರು. ಆದ್ದರಿಂದ ಅಲ್ಲಿದ್ದ ಶೈವರೊಂದಿಗೆ ಆಗಾಗ ಕಾವೇರಿದ ಚರ್ಚೆಯಲ್ಲಿ ತೊಡಗಿಕೊಳ್ಳುತ್ತಿದ್ದರು. ಮುಂಜಾನೆ ಭಾಷ್ಯಂ ಬಹು ಬೇಗನೆ ಎದ್ದು ಸ್ನಾನ, ಪೂಜೆ

ಮಾಡಿಯೇ ಮುಂದಿನ ಕೆಲಸಕ್ಕೆ ಅಣಿಯಾಗುತ್ತಿದ್ದರು. ಅಡಿಗೆಯನ್ನು ಚೆನ್ನಾಗಿ ಮಾಡಬಲ್ಲ ಭಾಷ್ಯಂ ಅಯ್ಯಂಗಾರರಿಗೆ ನಾವೆಲ್ಲ 'ಹೆಡ್ ಕುಕ್' ಎಂದೇ ಕರೆದು ತಮಾಷೆ ಮಾಡುತ್ತಿದ್ದೆವು. ಅನೇಕ ಬಾರಿ ಅವರು ನಮಗೆಲ್ಲ ಭಾರತೀಯ ದರ್ಶನ, ತತ್ತ್ವ ಶಾಸ್ತ್ರಗಳ ಕುರಿತು ಪಾಠ ಮಾಡುತ್ತಿದ್ದರು. ನಾವೆಲ್ಲ ಅವರನ್ನು ಒಂದು ತರಹ ಶಿಕ್ಷಣ ತಜ್ಞ ಎಂದು ಅಂದುಕೊಂಡಿದ್ದೆವು. ಭಾಷ್ಯಂ ಎಲ್ಲರಿಗೂ ಜೈಲಿನಲ್ಲಿ ಆ ಸಂದರ್ಭದ ರಾಜಕೀಯ, ಅರ್ಥವ್ಯವಸ್ಥೆ, ಗಾಂದೀಜಿಯವರ ಅಭಿವೃದ್ಧಿಯ ಕಲ್ಪನೆ ಮೊದಲಾದವನ್ನು ಚರ್ಚಿಸುತ್ತಿದ್ದರು.

ಭಾಷ್ಯಂ ಅಯ್ಯಂಗಾರ್ ವಕೀಲಿ ವೃತ್ತಿಯನ್ನು ಮಾಡುತ್ತಿದ್ದಾಗ ಚಂದ್ರಶೇಖರ ಐಯ್ಯರ್ ಎಂಬುವರು ಮುಖ್ಯ ನ್ಯಾಯಾಧೀಶರಾಗಿದ್ದರು. ಅವರಿಗೆ ಭಾಷ್ಯಂ ಅವರ ವಿಚಾರದಲ್ಲಿ ಎಲ್ಲಿಲ್ಲದ ಅಭಿಮಾನ. ಭಾಷ್ಯಂ ಅವರ ಬುದ್ಧಿವಂತಿಕೆಯನ್ನು ಚಂದ್ರಶೇಖರ್ ಅಯ್ಯರ್ ಉಳಿದವರೆದುರು ಆಗಾಗ ಹೊಗಳುತ್ತಿದ್ದರು. ಥಿಯೋಸಫಿಸ್ಟ್ ವೆಂಕಟೇಶ್ ಅಯ್ಯರ್ ಅವರು ಹೈಸ್ಕೂಲ್ ಹೆಡ್ ಮಾಸ್ಟರ್ ಆಗಿ ನಿವೃತ್ತಿ ಹೊಂದಿದವರು. ವೆಂಕಟೇಶ್ ಅಯ್ಯರ್ ಮನೆಗೆ ನಾನು ಆಗಾಗ ಹೋಗುತ್ತಿದ್ದೆ. ಅಲ್ಲಿ ನನಗೆ ಚಂದ್ರಶೇಖರ್ ಅಯ್ಯರ್ ಅವರ ಹತ್ತಿರದ ಪರಿಚಯವಾಯಿತು. ಒಮ್ಮೆ ನಾವು ಮಾತಾಡುತ್ತಿದ್ದಾಗ "ಎನ್ನಯ್ಯ ಜೋಯಿಸ, ಇಪ್ಪಡಿ ಆಯಿ ಪೋಚೆ" (ಏನು ಜೋಯಿಸರೆ, ಈ ರೀತಿ ಆಗಿಹೋಗಿದೆ.) ಎಂದರು. "ಎನ್ನ ಸಾರ್, ಉನ್ನ ಆಯಿ" (ಏನು ಸರ್, ಏನಾಯ್ತು?) ಎಂದಾಗ "ಅಂದ ಭಾಷ್ಯಂ ಇರಕ್ಕಾನೆ. ಅವನೇ ಎನ್ನ ಸ್ಥಾನಕ್ಕೆ ಲಾಯಕ್ಕ ಎನಚಿಕೊಂಡೆ. ಇವ ಗಾಂಧಿ ಟೋಪಿ ಪೊಟ್ಟಿಕೊಂಡ್ ಪೋಯಿಟ್ಟ." (ಆಭಾಷ್ಯಂ ಇದ್ದಾನೆ. ಅವನೇ ನನ್ನ ಸ್ಥಾನಕ್ಕೆ ಸರಿಯಾದ ವ್ಯಕ್ತಿ ಎಂದುಕೊಂಡೆ. ಇವನು ಗಾಂಧೀ ಟೋಪಿ ಹಾಕಿಕೊಂಡು ಹೋದ). ಎಂದಾಗ ಅಯ್ಯರ್ ಅವರಿಗೆ ಭಾಷ್ಯಂ ಕುರಿತಾದ ಗೌರವದ ಭಾವನೆ ಅರ್ಥವಾಯಿತು. ಬಹುಶಃ ಇವರಿಬ್ಬರೂ ತಮಿಳುನಾಡಿನ ಹೊಸೂರಿನವರು ಇದ್ದರೆಂದು ನನ್ನ ನೆನೆಪು. ಭಾಷ್ಯಂ ಕಾರ್ಮಿಕ ಸಚಿವರಾದಾಗ ನಾನು ವಿಧಾನ ಸಭೆಯಲ್ಲಿ ಸದಸ್ಯನಾಗಿದ್ದೆ. ಅವರು ಆ ಸಮಯದಲ್ಲಿ ಕಾರ್ಮಿಕರಿಗೆ ಸಂಬಂಧಿಸಿದ ಮಸೂದೆಯ ತಿದ್ದುಪಡಿಯನ್ನು ಧೈರ್ಯದಿಂದ ಮಾಡಿದ್ದರಿಂದ ಮೈಸೂರು ರಾಜ್ಯದಲ್ಲಿ ಗಂಭೀರ ಸ್ವರೂಪದ ಬದಲಾವಣೆಗಳಾದವು ಎಂಬುದರಲ್ಲಿ ಎರಡು ಮಾತಿಲ್ಲ. ಆ ಕಾಯ್ದೆಯಿಂದಾಗಿ ಇಂದು ನಮ್ಮ ರಾಜ್ಯದಲ್ಲಿ ವಾರದಲ್ಲೊಂದು ದಿನ (ಬಹುತೇಕವಾಗಿ ಭಾನುವಾರ) ಎಲ್ಲ ಅಂಗಡಿಗಳೂ ಮುಚ್ಚಿ ಕಾರ್ಮಿಕರಿಗೆ ವಾರದ ರಜೆ ಸಿಗುತ್ತದೆ. ಭಾಷ್ಯಂ ಅವರ ಈ ಮಹತ್ವದ ಕೆಲಸವನ್ನು ಮೈಸೂರು ರಾಜ್ಯದ ಜನತೆ ಬಹುಕಾಲ ನೆನೆಪಿನಲ್ಲಿಟ್ಟು-ಕೊಳ್ಳಬೇಕು.

ಭಾಷ್ಯಂ ಅವರಿಗೆ ಆಧ್ಯಾತ್ಮಿಕ ಚಿಂತನೆಯಲ್ಲಿ ವಿಶೇಷ ಒಲವಿತ್ತು. ಅವರ ದೃಷ್ಟಿಕೋನದಲ್ಲಿ ರಾಜಕೀಯವು ಆಧ್ಯಾತ್ಮಕ್ಕಿಂತ ಬೇರೆಯಲ್ಲ. ಆಧ್ಯಾತ್ಮಕ್ಕೆ ರಾಜಕೀಯ ಪೋಷಕವಾಗಿದ್ದರೆ, ರಾಜಕೀಯಕ್ಕೆ ಆಧ್ಯಾತ್ಮವು ಆತ್ಮ ಸಮಾನ. ಆದರೆ ಕೇವಲ ಆಧ್ಯಾತ್ಮವೆಂದು ಕಣ್ಣುಮುಚ್ಚಿ ಕುಳಿತುಕೊಂಡರೆ ಸಾಲದು. ಸುತ್ತಲಿರುವ ಜಗತ್ತಿನ ಕುರಿತೂ ಲಕ್ಷವಿರಲೇಬೇಕು. ಸುಮ್ಮನೇ ಕಣ್ಣುಮುಚ್ಚಿಕುಳಿತುಕೊಂಡಾಗ ಯಾರಾದರೂ ಹಿಂದಿನಿಂದ ಬಂದು ಬೆನ್ನಿಗೆ ಚೂರಿ ಹಾಕಿದರೆ ಏನು ಮಾಡುತ್ತೀರಿ ಏಂದು ಅವರು ನಮ್ಮನ್ನು ಕೇಳುತ್ತಿದ್ದುದುಂಟು.

ನಮ್ಮ ಭಾಷ್ಯಂ ಆಯ್ಯಂಗಾರ್ ಅವರು ನೋಡಲು ಬಲು ಸುಂದರವಾದ ಆಳು, ದೈಹಿಕವಾಗಿ ಎತ್ತರವಾದ ಅಂಗಸೌಷ್ಠವ. ಸುಂದರವಾದ ಮುಖ. ಪ್ರಖರ ಪ್ರಕಾಶಮಾನ ಕಣ್ಣುಗಳು. ಬಿಳಿಯ ಆಕರ್ಷಕ ಮೈಬಣ್ಣ. ಪ್ರಾರಂಭದ ದಿನಗಳಲ್ಲಿ ಅವರು ಬೈಸಿಕಲ್ಲಿನಲ್ಲಿ ಓಡಾಡುತ್ತಿದ್ದರು. ನಂತರ ಕಾರು ಇಟ್ಟಿದ್ದರು. ನಂತರ ಮತ್ತೆ ಕಾರು ಹೋಗಿ ಬೈಸಿಕಲ್ಲೇ ಬಂತು. ಮೈಸೂರು ಕಾಂಗ್ರೆಸ್‌ನಲ್ಲಿ ಯಾರೆ ಪ್ರೆಸಿಡೆಂಟ್ ಅಥವಾ ಉಳಿದ ಪದಾಧಿಕಾರಿಗಳಾಗಿರಲಿ, ಭಾಷ್ಯಂ ಅವರಿಗೆ ಒಂದು ಮಹತ್ವದ ಸ್ಥಾನ ಇದ್ದೇಇತ್ತು. ಕಾಂಗ್ರೆಸ್‌ನ ಯಾವುದೇ ಮಹತ್ವದ ನಿರ್ಣಯಗಳನ್ನು ಸ್ವೀಕರಿಸುವಾಗ ಅಲ್ಲಿ ಭಾಷ್ಯಂ ಇರುವುದು ಅನಿವಾರ್ಯವಾಗಿತ್ತು. ಭಾಷ್ಯಂ ಅಯ್ಯಂಗಾರರೇ ಮೈಸೂರು ಕಾಂಗ್ರೆಸ್ಸಿನಲ್ಲಿ ಆ ಸಮಯದ ಸುಮಾರಾಗಿ ಎಲ್ಲ ನಿರ್ಣಯಗಳನ್ನೂ ಬರೆದಿದ್ದರು. ಅವರಿಲ್ಲದೇ ಸತ್ಯಾಗ್ರಹಗಳು ನಡೆಯುವುದು ಕಷ್ಟಕರ ಎನ್ನುವಷ್ಟರಮಟ್ಟಿಗೆ ಅವರು ತಮ್ಮ ವರ್ಚಸ್ಸು ಹಾಗೂ ಅಗತ್ಯತೆಯನ್ನು ಉಳಿಸಿ, ಬೆಳಿಸಿಕೊಂಡಿದ್ದರು. ಇವರು ಉನ್ನತ ಧ್ಯೇಯಗಳಿಗೆ ಬಲವಾಗಿ ಅಂಟಿಕೊಂಡವರು. ಒಂದುಬಾರಿ ಭಾಷ್ಯಂ ತೊಟ್ಟಿದ್ದ ಬಟ್ಟೆ ಹರಿದುಹೋಗಿತ್ತು. ಅದನ್ನೇ ಗುಂಟುಹಾಕಿಕೊಂಡು ಬೈಸಿಕಲ್ಲಿನಲ್ಲಿ ಕಾಂಗ್ರೆಸ್ ಕಚೇರಿಗೆ ಭಾಷ್ಯಂ ಆಗಮಿಸಿದರು. ಆಗ ನಮ್ಮ ರಂಗಸ್ವಾಮಯ್ಯನವರು ಬೆಂಗಳೂರಿನ ಖಾದಿಭಂಡಾರದಲ್ಲಿ ಕೆಲಸ ಮಾಡುತ್ತಿದ್ದರು. ಖಾದಿ ಭಂಡಾರದ ಪಕ್ಕದಲ್ಲಿ ನಿಟ್ಟೂರು ಶ್ರೀನಿವಾಸರಾಯರ ಪುಸ್ತಕ ಬಂಡಾರವಿತ್ತು. ಭಾಷ್ಯಂ ಅಲ್ಲಿಗೆ ಪುಸ್ತಕ ನೋಡಲೆಂದು ಬಂದಿದ್ದರು. ಆ ಸಮಯದಲ್ಲಿ ಪುಸ್ತಕ ಹುಡುಕಲೆಂದು ಅಲ್ಲಿಗೆ ಆಗಮಿಸಿದ ವೆಂಕಟರಾಮಯ್ಯನವರೂ ಭಾಷ್ಯಂ ಹರಿದ ಬಟ್ಟೆಗಳಲ್ಲಿರುವುದನ್ನು ನೋಡಿದರು. ಭಾಷ್ಯಂ ತಮಗೆ ಬೇಕೆನಿಸಿದ ಪುಸ್ತಕದ ಪಟ್ಟಿ ಮಾಡುತ್ತಿರುವಾಗಲೇ ಪಕ್ಕದ ಖಾದಿ ಅಂಗಡಿಯಿಂದ ಬಂದ ಹೊಲಿಗೆಯ ನೌಕರನು ಭಾಷ್ಯಂ ಅವರ ಜುಬ್ಬಾ ಮತ್ತು ಪಾಯಿಜಾಮ ಅಳತೆಯನ್ನು ತೆಗೆದುಕೊಳ್ಳಲು ಮುಂದಾದ. ಭಾಷ್ಯಂ ಈ ವಿಷಯದಲ್ಲಿ ತಮ್ಮ ನಿಷ್ಕಂಳಂಕ, ಹಾಗೂ ಶುದ್ಧ ಮನಸ್ಸಿನ ಆಳವನ್ನು ಪ್ರದರ್ಶಿಸಿದರು. 'ನನಗೇಕೆ ಈ ಬಟ್ಟೆ-ಬರೆಗಳು? ಕೈಯಲ್ಲಿ ದುಡ್ಡಿಲ್ಲ, ಕಾಸಿಲ್ಲ' ಎಂದು ನುಡಿದರು. ನಂತರ ವೆಂಕಟರಾಮಯ್ಯನವರ ಒತ್ತಾಯಕ್ಕೆ ಮಣಿದು ಜುಬ್ಬ ಹೊಲಿಸಿಕೊಂಡರು.

ಅಯ್ಯಂಗಾರ್‌ರಿಗೆ ಮಕ್ಕಳಿರಲಿಲ್ಲ; ಇವರ ಶ್ರೀಮತಿಯವರಾದ ಕಲ್ಯಾಣಮ್ಮನವರ ತಮ್ಮ ಇವರೊಂದಿಗೇ ಒಟ್ಟಾಗಿ ಇದ್ದರೂ ಸಹ ಇವರ ಸ್ವಾತಂತ್ರ್ಯ ಕಹಳೆಯಿಂದ ಹೆಚ್ಚೇನೂ ಪ್ರಭಾವಿತನಾಗಲಿಲ್ಲ. ಸ್ವಾತಂತ್ರ್ಯದ ನಂತರವೂ, ಎಷ್ಟೆಲ್ಲ ಸರ್ಕಾರೀ ಹುದ್ದೆಗಳಲ್ಲಿದ್ದರೂ, ಇವರು ಸ್ವಂತಕ್ಕೆಂದು ಒಂದು ಮನೆಯನ್ನೂ ಮಾಡಿಕೊಳ್ಳಲಿಲ್ಲ. ಬಾಡಿಗೆ ಮನೆಯಲ್ಲಿದ್ದರು.

ಭಾಷ್ಯಂ ಅವರಿಗೆ ರಾಷ್ಟ್ರೀಯಮಟ್ಟದ ರಾಜಕೀಯ ಸಂಬಂಧಗಳಿರಲಿಲ್ಲವೆನ್ನುವದು ನಿಜ. ಆಗಿನ ಮೈಸೂರಿನಲ್ಲಿ ಮಹಾರಾಜರ ಆಳ್ವಿಕೆಯಿತ್ತು. ಆದ್ದರಿಂದ ಅವರು ಪ್ರಾಂತೀಯಮಟ್ಟದ ನೇತಾರರಾಗಿಯೇ ಉಳಿದರು. ಆದರೆ ಭಾಷ್ಯಂ ಅವರಲ್ಲಿ ರಾಷ್ಟ್ರೀಯಮಟ್ಟದ ಧುರೀಣತ್ವದ ಎಲ್ಲ ಮಹಾನ್ ಗುಣಗಳೂ ಮೈಗೂಡಿಕೊಂಡಿದ್ದವು. ಚಳವಳಿ ಶುರುವಾದಾಗ ಭಾಷ್ಯಂ ಜೈಲಿನಲ್ಲಿ ಇದ್ದಾಗಲೆಲ್ಲ 'ಸೋಶ್ಯಲಿಸಂ', 'ಕಮ್ಯುನಿಸಂ' ಹಾಗೂ 'ಫೇಬಿಯನ್ ಅಮೇರಿಕನ್ ಮುವ್ಮೆಂಟ್' ಮುಂತಾದವುಗಳನ್ನು ಕುರಿತು ಬರೆದ ಅನೇಕ ಪುಸ್ತಕಗಳನ್ನು ತರಿಸಿ ಓದುತ್ತಿದ್ದರಷ್ಟೇ ಅಲ್ಲ, ಅ ಓದನ್ನು ಉಳಿದ ಸಹ-ಸ್ವಾತಂತ್ರ್ಯ ಹೋರಾಟಗಾರರಿಗೂ ತಿಳಿಸಿ ಹೇಳುತ್ತಿದ್ದರು. ನಿಜಕ್ಕೂ

ಅವರೊಬ್ಬ ರಾಷ್ಟ್ರನಾಯಕರೆಂಬುದರಲ್ಲಿ ಸಂದೇಹವಿಲ್ಲ. ಅವರ ಮಟ್ಟ ನೆಹರು, ಸುಭಾಷಬೋಸ್ ಇವರ ಸರಿಸಮಾನವಾದದ್ದು. ಅಂತಹ ಬೌದ್ಧಿಕಶಕ್ತಿ, 'ಟ್ಯಾಲೆಂಟ್' ಹಾಗೂ 'ಫೇರ್ನೆಸ್' ಅವರಲ್ಲಿತ್ತು.

೨) **ಶ್ರೀ ಜೆ. ಲಿಂಗಯ್ಯ, ಬೆಂಗಳೂರು** (ಸನ್ಮಾನ್ಯ ಲಿಂಗಯ್ಯನವರು ಭಾಷ್ಯಂ ಅಯ್ಯಂಗಾರ್ ಅವರನ್ನು ಅತ್ಯಂತ ಹತ್ತಿರದಿಂದ ಬಲ್ಲವರು ಹಾಗೂ ಭಾಷ್ಯಂ ಅವರನ್ನು ತಮ್ಮ ರಾಜಕೀಯ ಜೀವನದ ಗುರುಗಳೆಂದೇ ಭಾವಿಸಿ ಗೌರವಿಸಿದವರು. ಅವರು ಸ್ವತಃ ಭಾಷ್ಯಂ ಜೀವನ ಕುರಿತು ದಿವಂಗತ ವಿ. ಎಸ್. ನಾರಾಯಣರಾವ್ ಅವರಿಂದ 'ಸ್ವಾತಂತ್ರ್ಯ ಸೇನಾನಿ ಕೆ. ಟಿ. ಭಾಷ್ಯಂ ಅಯ್ಯಂಗಾರ್' ಹೆಸರಿನ ಪುಸ್ತಕವೊಂದನ್ನು ಬರೆಸಿ ತಾವೇ ಪ್ರಕಟಿಸಿದ್ದಾರೆ. ನಾನು ಬೆಂಗಳೂರಿನ ಅವರ ಮನೆಯಲ್ಲಿ ಶ್ರೀ ಲಿಂಗಯ್ಯನವರೊಂದಿಗೆ ಈ ಕೃತಿಗಾಗಿ ನಡೆಸಿದ ಸಂವಾದ-ಸಂಭಾಷಣೆ ಭಾಷ್ಯಂ ಅವರನ್ನು ಅರ್ಥಮಾಡಿಕೊಳ್ಳುವಲ್ಲಿ ತುಂಬ ಉಪಯುಕ್ತವೂ ಸಹಾಯಕವೂ ಆಗಿದೆ. ಎಲ್ಲಕ್ಕೂ ಮಿಗಿಲಾಗಿ ಶ್ರೀ ಲಿಂಗಯ್ಯನವರು ಭಾಷ್ಯಂ ಅವರನ್ನು ಇಂದಿಗೂ ಪ್ರೀತಿಸುವ ಪರಿ ನನ್ನ ಮೇಲೆ ಭಾವನಾತ್ಮಕ ಪರಿಣಾಮವನ್ನು ಮಾಡಿದೆಯೆಂಬುದನ್ನು ತೆರೆದ ಹೃದಯದಿಂದ ಹೇಳಬಯಸುತ್ತೇನೆ)-

"ನಾನು ಶ್ರೀ ಭಾಷ್ಯಂ ಅವರನ್ನು ಮೊದಲಬಾರಿ ಭೆಟ್ಟಿಯಾದದ್ದು ೧೯೩೫ರಲ್ಲಿ ೧೯೨೭ರಲ್ಲಿಯೇ ಭಾಷ್ಯಂ ಬೆಂಗಳೂರಿನಲ್ಲಿ ಹತ್ತಿಗಿರಣಿ ಕಾರ್ಮಿಕರ ಸಂಘ ಸ್ಥಾಪನೆ ಮಾಡಿದರು. ಇದು ನಡೆದದ್ದು ಹೀಗೆ. ಅದಕ್ಕೂ ಕೆಲವು ದಿನಗಳ ಮೊದಲು ಬೆಂಗಳೂರಿನ ಬಿನ್ನಿಮಿಲ್‌ನಲ್ಲಿ ಕಾರ್ಮಿಕರ ಸೌಲತ್ತುಗಳಿಗೆ ಸಂಬಂಧಿಸಿದ ಹರತಾಳದಲ್ಲಿ ಕಾರ್ಮಿಕರನ್ನು ಕೂಡಿಹಾಕಿ ನಂತರ ಪೋಲೀಸರು ಲಾಠಿಚಾರ್ಜ್ ಮಾಡಿದ್ದನ್ನು ವಿರೋಧಿಸಿ ಕಾರ್ಯಾಚರಣೆ ಹಾಗೂ ನಂತರ ಈ ಸಂಘದ ಸ್ಥಾಪನೆಗಳು ಜರುಗಿದವು. ಆಗ ಈ ಕಾರ್ಮಿಕ ಸಂಘದ ಸದಸ್ಯತ್ವ ಎರಡೂ ಆಣೆಗಳು. ಈ ಸಂಘದ ಅಧ್ಯಕ್ಷರಾಗಿ ಭಾಷ್ಯಂ ಮತ್ತು ಕಾರ್ಯದರ್ಶಿಗಳಾಗಿ ಶ್ರೀ ಪಿ. ಎಂ. ರಾಮಶರ್ಮ. ಭಾಷ್ಯಂ ನಿಯಮಿತವಾಗಿ ಬಂದು ಕಾರ್ಮಿಕವರ್ಗದೊಡನೆ ಅನೇಕ ವಿಷಯಗಳನ್ನು ಚರ್ಚಿಸುವವರು. ಕಾರ್ಮಿಕರಿಗೆ ಅವರ ವಿಷಯದಲ್ಲಿ ಅಪಾರ ಪ್ರೀತಿ, ಗೌರವ."

ನನ್ನ ಮತ್ತು ಭಾಷ್ಯಂ ಅವರ ಭೇಟಿಯಾದದ್ದೂ ಸಹ ಕೆಲಸಗಾರರ ಸಮಸ್ಯೆಗಳಿಗೆ ಸಂಬಂಧಿಸಿದಂತೆಯೇ. ನಾನು ಆಗ ಮಿನೆರ್ವಾ ಮಿಲ್‌ನಲ್ಲಿ ಕೆಲಸಗಾರ. ಆ ಮಿಲ್ಲಿನ ಮಾಲಿಕರು ಶ್ರೀ ಡಿ. ಎಸ್. ಚಂದಾವರ್ಕರ್ ಅವರ ಮಗ ಶ್ರೀ ಡಿ. ಶಿರೂರ್ ಎಂಬವರಾಗಿದ್ದರು. ಆ ಮಿಲ್ಲಿನಲ್ಲಿ ಹೆಚ್ಚಿನ ವೇತನಕ್ಕೆಂದು ಮುಷ್ಕರವಾಗಿ ಅದರ ಪರಿಣಾಮವಾಗಿ ಒಂಭತ್ತು ಜನ ಕೆಲಸಗಾರರನ್ನು ಕೆಲಸದಿಂದ ವಜಾ ಮಾಡಲಾಗಿತ್ತು. ಆ ಸಂದರ್ಭದಲ್ಲಿ ಭಾಷ್ಯಂ ಮಿನೆರ್ವಾ ಮಿಲ್ಲಿಗೆ ಭೇಟಿ ಮಾಡಿದಾಗ ನಾನು ಮೊದಲಬಾರಿ ಅವರೊಂದಿಗೆ ಚರ್ಚಿಸಿದೆ. ಅಲ್ಲಿಂದ ಪ್ರಾರಂಭವಾದ ನಮ್ಮ ಗುರು-ಶಿಷ್ಯ ಸಂಬಂಧ ಅವರ ಜೀವನದ ಕೊನೆಯ ದಿನದವರೆಗೂ ಅವಿಬಾಧಿತವಾಗಿ ಉಳಿಯಿತು. ಆಗ ಕಾಂಗ್ರೆಸ್ ಕಛೇರಿ ಹಾಗೂ ಕಾರ್ಮಿಕರ ಸಂಘದ ಆಫೀಸು ಎರಡು ಅರಳೇಪೇಟೆಯಲ್ಲಿಯೇ ಇದ್ದವು.

೧೯೩೪ರಲ್ಲಿ ಬಿನ್ನಿಮಿಲ್ಲಿನಲ್ಲಿ ೩೦ ದಿನಗಳ ದೀರ್ಘಾವಧಿ ಮುಷ್ಕರ ನಡೆಯಿತು. ಭಾಷ್ಯಂ ಆ ಮಹಾ ಮುಷ್ಕರದ ಧುರೀಣತ್ವ ವಹಿಸಿದ್ದರು. ೧೯೪೧ರಲ್ಲಿ ಮಿನೆರ್ವ ಹಾಗೂ ಮಹಾರಾಜ

ಮಿಲ್ಲುಗಳ ಕಾರ್ಮಿಕರ ತೊಂದರೆಗಳನ್ನು ಪ್ರತಿಭಟಿಸಿ ಎರಡೂ ಗಿರಣಿಗಳ ಕೆಲಸಗಾರರು ಧರಣಿ ಸತ್ಯಾಗ್ರಹ ನಡೆಸಿದರು ಖಾಯಂ ಕೆಲಸಗಾರರೂ ಹಾಗೂ 'ಪೀಸ್' ಕೆಲಸಗಾರರು ಇಬ್ಬರೂ ಸೇರಿದ್ದರು. ಮಿ. ಲೀಸ್ ಎಂಬುವರು ಆಗ ಪೋಲೀಸ್ ಅಧಿಕಾರಿ. ಆ ಸಮಯದಲ್ಲಿ ಲೇಬರ್ ಮುಖಂಕಡನಾಗಿದ್ದರಿಂದ ನನ್ನನ್ನು ಒಳಗೆ ಕರೆಸಿ 'ಮುಷ್ಕರ ಹಿಂತೆಗೆದುಕೊಳ್ಳದಿದ್ದರೆ ಕೆಲಸದಿಂದ ತೆಗೆದುಹಾಕಬಹುದು' ಎಂದ ಎಚ್ಚರಿಸಿದರು. ಅದಕ್ಕೆ ನಾನು 'ಕೆಲಸ ಹೋದರೂ ಪರವಾಗಿಲ್ಲ, ದಯವಿಟ್ಟು ಕ್ಷಮಿಸಿ' ಎಂದೆ. ಪರಿಣಾಮವಾಗಿ ನನ್ನನ್ನು ಕೆಲಸದಿಂದ ತೆಗೆದರು. ಮಾರನೆದಿನ-ಎಂದರೆ ಏಪ್ರಿಲ್ ೨೨ರಂದು - ಎರಡೂ ಗಿರಣಿಗಳು 'ಲಾಕೌಟ್' ಆದವು. ಆ ಸಮಯದಲ್ಲಿ 'ದೀನ ಸೇವಾ ಸಂಘ'ದ ಅಧ್ಯಕ್ಷರಾಗಿದ್ದ, ಭಾಷ್ಯಂ ಅವರ ಆಪ್ತಮಿತ್ರ ಆಜನ್ಮ ಬ್ರಹ್ಮಚಾರಿ ಶ್ರೀ ರಾಮಚಂದ್ರರಾವ್ ಅವರು ಭಾಷ್ಯಂ ಅವರಿಗೆ 'ಅಡ್ವಾಯ್ಸ್' ಮಾಡಿದರು "ದೀರ್ಘಕಾಲದ ಮುಷ್ಕರದಿಂದ ಕೆಲಸಗಾರರಿಗೆ ಮತ್ತು ಅವರ ಕುಟುಂಬದ ಉಳಿದ ಸದಸ್ಯರಿಗೆ ತುಂಬ ತೊಂದರೆಯಾಗುತ್ತದೆ. ನೀವು (ಭಾಷ್ಯಂ) ದಿವಾನರಾದ ಸರ್ ಮಿರ್ಜಾ ಇಸ್ಮೈಲ್ ಅವರ ಜೊತೆ ಚರ್ಚಿಸಿ ಹೇಗಾದರು ಮಾಡಿ ಬೀಗಮುದ್ರೆ (ಲಾಕೌಟ್) ತೆಗೆಸಿ. ಈ ವಿಷಯ ಕೂಡಲೆ ಇತ್ಯರ್ಥ ಮಾಡಿ" ಎಂದು. ಭಾಷ್ಯಂ ಅವರ ಪ್ರಯತ್ನ ಫಲಕಾರಿಯಾಯಿತು. ಸರ್ಕಾರದಿಂದಲೂ 'ಕಾರ್ಮಿಕರು ಮಿರ್ಜಾ ಸಾಹೇಬರನ್ನು ನೋಡಬಹುದು' ಎಂದು 'ಪ್ರೆಸ್ ನೋಟ್' ಬಂತು. ಅಂತೆಯೇ ನಾವು ಮಿರ್ಜಾ ಸಾಹೇಬರನ್ನು ಭೇಟಿಯಾದೆವು. ಮಿರ್ಜಾ ಸಾಹೇಬರಿಗೂ ಭಾಷ್ಯಂ ಅಯ್ಯಂಗಾರ್‌ರಿಗೂ ಸಂಬಂಧ ಅಷ್ಟು ಚೆನ್ನಾಗಿರದಿದ್ದ ಕಾರಣ ಅವರು ತೆರೆಮರೆಯಲ್ಲಿ ನಿಂತೇ ನಮ್ಮ ಪರವಾಗಿ ಕೆಲಸ ಮಾಡಿದರು. ಏಪ್ರಿಲ್ ೪ ರಂದು ಸಾಯಂಕಾಲ ಮಿರ್ಜಾ ಸಾಹೇಬರು ಹಾಗೂ ನಮ್ಮ ಭೇಟಿಯ ಸಮಯ ನಿಶ್ಚಯವಾಯಿತು. ಭಾಷ್ಯಂ ಎರಡು ಮಿಲ್‌ಗಳಿಂದ ೧೨ ಜನ ಕಾರ್ಮಿಕರನ್ನು ಈ ಭೇಟಿ ಹಾಗೂ ಚರ್ಚೆಗೆಂದು ಆರಿಸಿದರು. ಈ ಕಾರ್ಮಿಕರ ಗುಂಪಿಗೆ ನನ್ನನ್ನೇ ಸಂಯೋಜಕನೆಂದು ಹೆಸರಿಸಿಯೂ ಆಯಿತು. ಅಂದಿನ ಚರ್ಚೆಯಲ್ಲಿ ಮಿರ್ಜಾ ಅವರು ಹೇಳಿದ ಕೆಲವು ಮಾತುಗಳು ಇಂದಿಗೂ ನನ್ನನ್ನು ಕಾಡಿಸುತ್ತಿವೆ. ಅವರು ಹೇಳಿದರು: "ನೀವು ಬ್ರಾಹ್ಮಣರ (ಭಾಷ್ಯಂ ಅವರ) ಮಾತು ಕೇಳಿ ಕೆಡಬೇಡಿ. ನಾನು ಲೇಬರ್ ಡಿಪಾರ್ಟ್‌ಮೆಂಟಿನಿಂದ ವಿಚಾರಣೆ ಮಾಡಿಸುತ್ತೇನೆ. ಲಾಕೌಟ್ ತೆಗೆಸುತ್ತೇನೆ. ಕೆಲಸಕ್ಕೆ ಮರಳಿಬನ್ನಿ." ಈ ಮಾತಿನಂತೆ ಕಾರ್ಮಿಕರೆಲ್ಲರೂ ಕೆಲಸಕ್ಕೆ ಬರಲು ಒಪ್ಪಿಕೊಂಡರು. ಆ ದಿನ ಸಂಜೆ ೭ ಘಂಟೆಗೆ ನಾನು ಹಾಗೂ ಉಳಿದ ಕೆಲವು ಸ್ನೇಹಿತರು ಸೇರಿ ಕಾಂಗ್ರೆಸ್ ಆಫೀಸಿಗೆ ಬಂದೆವು. ಅಲ್ಲಿ ಭಾಷ್ಯಂ ನಡೆದ ಸಮಾಚಾರವೆಲ್ಲವನ್ನೂ ಕೇಳಿದರು. ನಂತರ ನನ್ನನ್ನುದ್ದೇಶಿಸಿ "ನೀನು ಎಚ್ಚರದಿಂದ ಇರಬೇಕು. ಡಿಸ್ ಮಿಸ್ ಆದರೂ ಆಗಬಹುದು" ಎಂದು ಹೇಳಿದರು. ಮಿಲ್ಲಿನಲ್ಲಿ ಕೆಲಸವೇನೋ ಪ್ರಾರಂಭವಾಯಿತು. ಆದರೆ ಸಮಸ್ಯೆಗಳು ತುಸು ಕೂಡ ಬಗೆಹರಿಯಲಿಲ್ಲ. ಪುನಃ ಹರತಾಳದ ದಾರಿ ಹಿಡಿಯಬೇಕಾಯಿತು. ಏಪ್ರಿಲ್ ೨೨ರಂದು ವಿಚಾರಣೆ ಯಾಯಿತು. ಹೀಗೆ ತೊಂದರೆಗಳು ಮುಂದುವರಿಯುತ್ತಲೇ ನಡೆದವು.

ಭಾಷ್ಯಂ ಅವರು ನನ್ನನ್ನು ನೋಡಿಕೊಂಡ ರೀತಿಯಲ್ಲಿ ಯಾವ ಅಣ್ಣನೂ ತನ್ನ ಸ್ವಂತ ತಮ್ಮನನ್ನು ನೋಡಿಕೊಂಡಿರಲಾರ. ಅವರು ನನ್ನ ಗುರುಗಳು ಮಾತ್ರವಲ್ಲ, ಬಂಧುಗಳೂ ಆಗಿದ್ದರು. ಮೇ ೭ ರಂದು ಬೆಂಗಳೂರಿನ ಲಾಲ್‌ಬಾಗ್‌ನಲ್ಲಿ ಸಭೆ. ಆ ಸಭೆಯಲ್ಲಿ 'ಲಿಂಗಯ್ಯನವರು

ಮಾತಾಡಕೂಡದು' ಎಂದು ಭಾಷ್ಯಂ ಆದೇಶಿಸಿದರು. ಭಾಷಣ ಮಾಡಿದರೆ ನನ್ನ ಬಂಧನವಾಗುವುದೆಂದು ಅವರಿಗೆ ತಿಳಿದಿತ್ತು. ನಾನು ಮಾತಾಡಲಿಲ್ಲ. ಆದರೂ ಅದೇದಿನ ರಾತ್ರಿ ನನ್ನನ್ನು ಬಂಧಿಸಿ ಸೆರೆಮನೆಗೆ ತಳ್ಳಿದರು. ಅಂತೆಯೆ, ಭದ್ರಾವತಿಯಲ್ಲಿ ಬೇಬಿ ಸರೋಜ ಅವರನ್ನು ಗುಂಡಿಟ್ಟು ಕೊಂದಾಗ ನಾವು ಕಡುವಿರೋಧಿ ಪ್ರತಿಭಟನೆ ಮಾಡಿದೆವು. ಅಂತೂ ಈ ಎಲ್ಲ ಪ್ರಯತ್ನಗಳ ಫಲವೆಂಬಂತೆ ೧೯೪೭ರ ಫೆಬ್ರವರಿಯಲ್ಲಿ 'ಮೈಸೂರು ಲೇಬರ್ ಆಕ್ಟ್' ಜಾರಿಗೆ ಬಂತು. ಇದರ ಪ್ರಕಾರ ಕೆ. ಚಂಗಲರಾಯ ರೆಡ್ಡಿ, ಕೆ. ಟಿ. ಭಾಷ್ಯಂ, ಮಾಧವ ರಾವ್ (ಭದ್ರಾವತಿ) ಇವರೆಲ್ಲರೂ ಸೇರಿ ಕಾನೂನು ರೀತ್ಯಾ 'ಅಸೋಸಿಯೇಶನ್' ಪ್ರಾರಂಭಿಸಲು ಸಾಧ್ಯವಾಯಿತು.

ಕೆಲವು ಭಾವನಾತ್ಮಕ ವಿವರಗಳನ್ನು ನಾನು ಇಲ್ಲಿ ನೀಡಲೇಬೇಕು. ಭಾಷ್ಯಂ ಅಯ್ಯಂಗಾರ್ ಅವರು ನನ್ನ ತಂದೆಯ ಸಮಾನ. ಅವರಿಗೆ ಕೆಟ್ಟ ಹೆಸರು ಬರದಂತೆ ನೋಡಿಕೊಳ್ಳುವುದೇ ನನ್ನ ಏಕಮೇವ ಗುರಿಯಾಗಿತ್ತು. ಭಾಷ್ಯಂ ಹಾಗೂ ಹನುಮಂತಯ್ಯನವರಿಗೆ ನಾನು ಹೆದರುತ್ತಿದ್ದೆ. ನಿಜ ಹೇಳಬೇಕೆಂದರೆ ನಾನು ಜೀವನದಲ್ಲಿ ಭಯಪಟ್ಟಿದ್ದು ಇವರಿಬ್ಬರಿಗಷ್ಟೆ. ಆದರೆ ಭಾಷ್ಯಂ ಒಬ್ಬರೇ ನನ್ನ ಗುರುಗಳು. ಹನುಮಂತಯ್ಯನವರು ನನ್ನ ಹಿರಿಯರು ನಿಜ, ಆದರೆ ನನಗೆ ಗುರು ಮಾತ್ರ ಒಬ್ಬರೇ - ಭಾಷ್ಯಂ.

ಭಾಷ್ಯಂ ಒಳ್ಳೆ ಸೌಮ್ಯ ಸ್ವಭಾವದವರು. ಅವರು ಯಾರಿಗೂ ಕಠಿಣವಾಗಿ ಅವರ ಜೀವನದಲ್ಲಿಯೇ ಮಾತಾಡಿರಲಿಕ್ಕಿಲ್ಲವೇನೊ. ಊಟದಲ್ಲಿ ತುಂಬ ಮಿತವೇ. ಮುದುಕಿಯೊಬ್ಬಳಿಂದ, ಹಳ್ಳಿಯಿಂದ ಶುದ್ಧ ತುಪ್ಪ ತರಿಸುತ್ತಿದ್ದರು. ಮನೆಗೆ ಯಾರೆ, ಎಷ್ಟುಹೊತ್ತಿನಲ್ಲಾಗಲೀ, ಬರಲಿ, ಅವರನ್ನು ನಗುತ್ತ ಸ್ವಾಗತಿಸುತ್ತಿದ್ದರು. ಬೆಳಿಗ್ಗೆ ೬ ಘಂಟೆಗೆ ಸ್ನಾನಮಾಡಿ, ಅವರೇ ಒಳಗೆಹೋಗಿ ಕಾಫಿಮಾಡಿ, ಉಯ್ಯಾಲೆಯಲ್ಲಿ ಹೆಂಡತಿಯೊಂದಿಗೆ ತುಸುಹೊತ್ತು ಕುಳಿತು ಕಾಫಿ ಕುಡಿಯುವುರು. ನಂತರ ೭ ಘಂಟೆಯ ಸುಮಾರಿಗೆ ಆಫೀಸಿಗೆ ಬರುತ್ತಿದ್ದರು. ಅವರು ಕಾಫಿಯನ್ನೂ, ಹೆಂಡತಿಯನ್ನೂ ಪ್ರೀತಿಸುವ ರೀತಿ ನಿಜಕ್ಕೂ ಅದ್ಭುತವಾಗಿತ್ತು. ಆಗಾಗ ಒಳಗೆ ಹೋಗಿ "ಎನ್ನ ಕಲ್ಯಾಣಿ, ಕಾಫಿ ಸಾಪಡಿಯಾ" ಎಂದು ಮಡದಿಯೊಡನೆ ಕೇಳಿಬರುವವರು. ಅವರ ಪೋಷಾಕೂ ಕೂಡ ಹಾಗೆ: ಪಂಚೆ, ಜುಬ್ಬಾ, ಹಾಗೂ ಹೆಗಲಮೇಲೆ ಖಾದಿ ಟವೆಲ್ಲು. ಜಾತೀಯತೆಯ ಕಟ್ಟಾ ವಿರೋಧಿ. ಸ್ನೇಹಿತರಿಗಾಗಿ ಏನುಬೇಕಾದರೂ ಮಾಡುವಂಥವರು. ಅದಕ್ಕಾಗಿಯೇ ಅವರು ತಮ್ಮ ವಕೀಲವೃತ್ತಿಯ ಸನ್ನದ್ ಕಳೆದುಕೊಂಡು ಆರ್ಥಿಕವಾಗಿ ಅತಿಯಾದ ಸಂಕಷ್ಟದಲ್ಲಿದ್ದಾಗ ಅವರ ಮಿತ್ರರಾದ ಒ. ಗೋಪಾಲನ್ ಅವರಿಗೆ ಬಹಳ ಸಹಾಯಮಾಡಿದರು.

ಭಾಷ್ಯಂ ಅವರಿಗೆ ಕೃಷಿ-ವ್ಯವಸಾಯಗಳಲ್ಲಿ ಬಹಳ ಆಸಕ್ತಿ ಅವರು ಎರಡು ತೋಟಗಳನ್ನು ಖರೀದಿಸಿದ್ದರು, ಆದರೆ ಎರಡೂ ಚೆನ್ನಾಗಿರಲಿಲ್ಲ. ಅವರು ಆಯ್. ಎಲ್. ಒ., ಸಮ್ಮೇಳನಕ್ಕೆ ಹೋಗುವಾಗ ಮಹಾರಾಜರಿಂದ ತೆಗೆದುಕೊಂಡಿದ್ದ ಸಾಲ ತೀರಿಸಲೆಂದು ಅವರು ಆ ತೋಟಗಳನ್ನು ಎಂ.ಬಿ.ಟಿ. ಕಂಪನಿಗೆ ಮಾರಾಟಮಾಡಿದರು. ಅವರ ಕೊನೆಗಾಲದಲ್ಲಿ ಅವರ ಹೆಂಡತಿಯ ತಮ್ಮ (ತಂಗಿಯ ಮಗ!) ಸುಂದರ್ ಅವರೊಂದಿಗಿದ್ದ.

ಭಾಷ್ಯಂ ಬಗ್ಗೆ ಹೇಳುತ್ತ ಹೋದರೆ ಅದು ಸಾವಿರಾರು ಪುಟಗಳ ಬೃಹತ್ ಗ್ರಂಥವಾದೀತು. ಒಂದೇಮಾತಿನಲ್ಲಿ ಹೇಳಬೇಕೆಂದರೆ "ಭಾಷ್ಯಂ ಒಬ್ಬ ಯುಗಪುರುಷ. ಅವರೊಬ್ಬ ಅತಿಶ್ರೇಷ್ಠ

ದಾರ್ಶನಿಕ ಹಾಗೂ ಮಾನವತಾವಾದಿ. ಭಾಷ್ಯಂ ಅವರಂತಹ ವಾಗ್ಮಿ ಕರ್ನಾಟಕದ ಇತಿಹಾಸದಲ್ಲಿಯೇ ಅತಿವಿರಳವೆನ್ನುವ ಮಾತಿನಲ್ಲಿ ಏನೇನೂ ಅತಿಶಯೋಕ್ತಿಯಿರಲಾರದು.''

೩) **ಶ್ರೀ ಎಚ್. ಎಸ್. ದೊರೆಸ್ವಾಮಿ, ಬೆಂಗಳೂರು** (ಶ್ರೀ ದೊರೆಸ್ವಾಮಿಯವರು ಕರ್ನಾಟಕದ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಒಬ್ಬರು. ೧೯೩೭ರ ರಿಂದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಾಗೂ ಸ್ವಾತಂತ್ರ್ಯಾ ನಂತರ ದೇಶ ಸೇವೆಯಲ್ಲಿ ತಮ್ಮನ್ನು ಪೂರ್ಣವಾಗಿ ತೊಡಗಿಸಿಕೊಂಡಿರುವ ಶ್ರೀ ಎಚ್. ಎಸ್. ದೊರೆಸ್ವಾಮಿಯವರು ಕೆ. ಟಿ. ಭಾಷ್ಯಂ ಅವರ ಕಿರಿಯ ಸ್ನೇಹಿತರಲ್ಲಿ ಒಬ್ಬರು. ರಾಜಕೀಯ ಕ್ಷೇತ್ರವಲ್ಲದೇ ಸಮಾಜ ಸೇವೆ, ಸಾಹಿತ್ಯ ಹಾಗೂ ವಿಶೇಷವಾಗಿ ಪರಿಸರಪರ ಹೋರಾಟದಲ್ಲಿ ದೊರೆಸ್ವಾಮಿಯವರು ನಿರಂತರವಾಗಿ ತಮ್ಮ ಇಳಿ ವಯಸ್ಸಿನಲ್ಲಿಯೂ ತೊಡಗಿಕೊಂಡಿದ್ದಾರೆ. ಭಾಷ್ಯಂ ಅವರನ್ನು ಬಹಳ ಹತ್ತಿರದಿಂದ ನೋಡಿದ ಇವರ ಕೆಲವು ಸ್ಪಷ್ಟ ಅನಿಸಿಕೆಗಳನ್ನು ಇಲ್ಲಿ ತೆರೆದಿಡಲಾಗಿದೆ.)-

''ನಾನು ಭಾಷ್ಯಂ ಅಯ್ಯಂಗಾರ್ ಅವರನ್ನು ಮೊದಲ ಬಾರಿ ನೋಡಿದ್ದು ೧೯೩೭-೩೮ರಲ್ಲಿ. ಆ ಸಂಧರ್ಭವೇ ಒಂದು ವಿಶೇಷವಾದದ್ದು. ಒಂದು ಬಾರಿ ೧೯೩೭ರಲ್ಲಿ ಮೈಸೂರು ಕಾಂಗ್ರೆಸ್ಸಿನ ತ್ರಿಮೂರ್ತಿಗಳು - ಎಂದರೆ ತಗಡೂರು ರಾಮಚಂದ್ರ ರಾಯರು ವೀರಕೇಸರಿ ಸೀತಾರಾಮ ಶಾಸ್ತ್ರಿಗಳು ಮತ್ತು ಟಿ. ಸಿದ್ದಲಿಂಗಯ್ಯನವರು - ಕಾಂಗ್ರೆಸ್ ಪ್ರಚಾರಕ್ಕಾಗಿ ಹಾಗೂ ಜವಾಬ್ದಾರಿ ಸರಕಾರದ ಉದ್ದೇಶವನ್ನು ಜನರಿಗೆ ತಿಳಿಸುವುದಕ್ಕಾಗಿ ಮೈಸೂರು ಸೀಮೆಯನ್ನೆಲ್ಲ ತಿರುಗಿ ಬಂದರು. ಆ ಸಮಯದಲ್ಲಿ ಈ ಮೂವರ ದಸ್ತಗಿರಿಯಾಯಿತು. ಕೋರ್ಟಿನ ಮುಂದೆ ಇವರನ್ನು ತಂದು ಶಿಕ್ಷೆಯೂ ಜಾರಿಯಾಯಿತು. ಆಗ ಈ ಧುರೀಣರು ಭಾಷ್ಯಂರವರನ್ನು ಎರಡನೆ dictator ಎಂದು ಮಾಡಿದ್ದರು. ಆಗ ಕೋರ್ಟಿನಲ್ಲಿ ಅವರನ್ನು ಕರೆದುಕೊಂಡು ಬಂದಾಗ ಮೊದಲ ಬಾರಿ ನಾನು ಅವರನ್ನು ನೋಡಿದೆ. ಅಂದು ಕೋರ್ಟ್ ಕಿಕ್ಕಿರಿದು ತುಂಬಿತ್ತು. ಭಾಷ್ಯಂ ಅವರ ಬಗ್ಗೆ ಬೆಂಗಳೂರಿನ ಜನರಿಗೆ ಇರುವ ತುಂಬು ಅಭಿಮಾನವನ್ನು ಅಂದಿನ ಜನಸ್ತೋಮ ಸೂಚಿಸುತ್ತಿತ್ತು. ಶ್ರೀ ಗುರುದತ್ ಆ ದಿನದ ಮ್ಯಾಜಿಸ್ಟ್ರೇಟ್ ಆಗಿದ್ದರು. ವಿಚಾರಣೆ ಆದ ಬಳಿಕ ಭಾಷ್ಯಂ ಅವರಿಗೆ ಎರಡು ವರ್ಷದ ಶಿಕ್ಷೆ ಎಂದು ತೀರ್ಪು ನೀಡಲಾಯಿತು. ತೀರ್ಪನ್ನು ಕೇಳಿದಾಗ ಬಹುಶಃ ಕೋರ್ಟಿನಲ್ಲಿದ್ದ ಎಲ್ಲರಿಗೂ ಕಣ್ಣೀರು ಬಂತು. ಮ್ಯಾಜಿಸ್ಟ್ರೇಟ್‌ರವರು ಭಾಷ್ಯಂ ಅವರಲ್ಲಿ 'ಒಮ್ಮೆ ಮನೆಗೆ ಬೇಕಾದರೆ ಹೋಗಿ ನಿಮ್ಮ ಸಾಮಾನುಗಳನ್ನು ತೆಗೆದುಕೊಂಡು ಬರಬಹುದು' ಎಂದಾಗ ಭಾಷ್ಯಂ 'ತುಂಬಾ ಧನ್ಯವಾದಗಳು, ಸಾಮಾನಿಗಾಗಿ ಅಲ್ಲ ನನ್ನ ಹೆಂಡತಿಯನ್ನು ನೋಡಿ ಬರಲು ಮನೆಗೆ ಹೋಗಿಬರಬೇಕಾಗಿದೆ' ಎಂದಾಗ ಅಂತಹ ಸಮಯದಲ್ಲಿಯೂ ಕೋರ್ಟಿನಲ್ಲಿ ನಗುವಿನ ಅಲೆ ಎದ್ದಿತು. ಆ ದುಃಖದ ಸಮಯದಲ್ಲಿಯೂ ಪ್ರಸನ್ನತೆ ಮೂಡಿತು. ಹೀಗೆ ಭಾಷ್ಯಂ ಯಾವಾಗಲೂ ಪ್ರಸನ್ನ ಚಿತ್ತರು. ಎಲ್ಲ ಸಂದರ್ಭಗಳಲ್ಲಿಯೂ ಇವರ ಮಾತು, ಮನಸ್ಸು, ನಗು ನೋಡಿ ನನ್ನ ಮನಸ್ಸಿನಲ್ಲಿ ಪ್ರಾರಂಭದಿಂದಲೇ ಭಾಷ್ಯಂ ಬಗ್ಗೆ ಬಹಳ ಒಳ್ಳೆಯ ಅಭಿಪ್ರಾಯ ಉಂಟಾಯಿತು. ಇದು ನನ್ನ-ಅವರ ಮೊದಲ ಪರಿಚಯ.

ಭಾಷ್ಯಂ ಅವರ ತಂದೆ ನರಸಿಂಹ ಅಯ್ಯಂಗಾರ್ ದೊಡ್ಡ ವಕೀಲರು. ಇವರೂ ಕೂಡ ಅಷ್ಟೇ ಪ್ರಖ್ಯಾತ ವಕೀಲರು. ಆದರೆ ಇವರು ಜೊತೆಗೇ ಸಾರ್ವಜನಿಕ ಸಂಬಂಧವನ್ನೂ ಬಹಳವಾಗಿ ಇಟ್ಟುಕೊಂಡಿದ್ದರು. ಬೆಂಗಳೂರಿನಲ್ಲಿ ಜರುಗುವ ಯಾವುದೇ ಸಾರ್ವಜನಿಕ ವಿಷಯಗಳ ಕುರಿತೂ

ತಮ್ಮ ಸ್ಪಷ್ಟ ಹಾಗೂ ನಿರ್ಭಿಡೆಯ ಅಭಿಪ್ರಾಯಗಳನ್ನು ತಿಳಿಸುತ್ತಿದ್ದರು. ಇವರ ತಂದೆ ಕಾಂಗ್ರೆಸ್ಸಿನ ಚಳವಳಿಯಲ್ಲಿರಲಿಲ್ಲ. ಇವರ ಚಿಕ್ಕಪ್ಪ ಸ್ಕೂಲ್ ಇನ್‌ಸ್ಪೆಕ್ಟರ್ ಆಗಿದ್ದರು. ಹೀಗೆ ಇವರನ್ನುಳಿದು ಇವರ ಕುಟುಂಬದ ಯಾವ ಸದಸ್ಯನೂ ಸ್ವಾತಂತ್ರ್ಯ ಸಂಗ್ರಾಮದಲ್ಲಿ ದುಡಿದದ್ದು ಗೊತ್ತಿಲ್ಲ. ಭಾಷ್ಯಂರವರು ಮಾತ್ರ ಬೆಂಗಳೂರಿನಲ್ಲಿ ಯಾವುದೇ ಸಮಸ್ಯೆಗಳಿದ್ದರೂ ಸಾರ್ವಜನಿಕರ ಜೊತೆ ಇದಕ್ಕೆ ದನಿ ಗೂಡಿಸುತ್ತಿದ್ದರು. ಹಾಗೆಯೇ ಇವರು ಕಾರ್ಮಿಕರನ್ನು ಒಗ್ಗೂಡಿಸುವ ಸಂದರ್ಭ ಬಂತು. ರಾಮ ಶರ್ಮ ಎಂಬ ದಕ್ಷಿಣ ದೇಶದವರು ಇವರೊಂದಿಗೆ ಸೇರಿಕೊಂಡು ಬೆಂಗಳೂರಿನ ಹಾಗೂ ಸುತ್ತಮುತ್ತಲಿನ ಕೈಗಾರಿಕಾ ಕಾರ್ಮಿಕರನ್ನು ಒಂದು ಗೂಡಿಸುವ ಕಾರ್ಯದಲ್ಲಿ ತೊಡಗಿಕೊಂಡರು. ಮುಖ್ಯರಾಗಿ ಬಿನ್ನಿ ಮಿಲ್ಸ್, ರಾಜಾ ಮಿಲ್ಸ್, ಮಿನರ್ವ ಮಿಲ್ಸ್ ಇವುಗಳಲ್ಲೆಲ್ಲ ತಮಿಳು ಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿ ದುಡಿಯುತ್ತಿದ್ದರು. ಇದರ ಜೊತೆಯಲ್ಲಿ ಮಾತಾಡಲು ತಮಿಳು ಬಲ್ಲವರಾದ ರಾಮ ಶರ್ಮ ಮತ್ತು ಭಾಷ್ಯಂ ಅವರಿಗೆ ಅನುಕೂಲವಾಗಿತ್ತು. ಹೀಗೆ ಔದ್ಯಮಿಕ ಕೆಲಸಗಾರರನ್ನು ಮುಂದಿಟ್ಟುಕೊಂಡು ಇವರು ಕಾರ್ಮಿಕ ಸಂಘಗಳನ್ನು ಪ್ರಾರಂಭಿಸಿದರು. ಈ ಮೂಲಕ ಭಾಷ್ಯಂ ಕೈಗಾರಿಕಾ ಕಾರ್ಮಿಕರ ಸಮಸ್ಯೆಗಳಿಗೆ ಸ್ಪಂದಿಸಲು ಅನುವು ಮಾಡಿಕೊಂಡರು. ಕೆಲಸಗಾರರಿಗೆ ಸಂಬಂಧಿಸಿದ ವೇತನ, ಬೋನಸ್, ರಜೆ ಮುಂತಾದ ವಿಷಯಗಳಲ್ಲಿ ಯಾವುದೇ ರೀತಿಯ ಅನ್ಯಾಯವಾದಾಗಲೂ ಅಥವಾ ಕೆಲಸಗಾರರನ್ನು ವಿನಾ ಕಾರಣ ಕೆಲಸದಿಂದ ತೆಗೆದು ಹಾಕುವ ಘಟನೆಗಳನ್ನು ನಡೆದಾಗ ಭಾಷ್ಯಂ ಧ್ವನಿ ಎತ್ತಿ, ಸಾರ್ವಜನಿಕ ಸಭೆಗಳನ್ನು ಕರೆದು ಕಾರ್ಮಿಕರನ್ನು ಹುರಿದುಂಬಿಸಿ ಮುಷ್ಕರ ಮಾಡುವಂತೆ ಪ್ರೇರೇಪಿಸುತ್ತಿದ್ದರು. ಭಾಷ್ಯಂ ಅವರ ಇಂಥ ಕಾರ್ಮಿಕ ಸಂಘಟನೆಯ ಕಾರ್ಯ ಮೈಸೂರು ಪ್ರಾಂತ್ಯದಲ್ಲಿ ಕಾಂಗ್ರೆಸ್ ಸಂಸ್ಥೆಯನ್ನು ಕಟ್ಟಲು ತುಂಬಾ ಅನುಕೂಲತೆಗಳನ್ನು ಒದಗಿಸಿಕೊಟ್ಟಿತು. ಯಾವಾಗ ನಾಯಕನಾದವನು ಜನರ ಸಮಸ್ಯೆಗಳಿಗೆ ಸ್ಪಂದಿಸಿ ಇಂಥ ಸಮಸ್ಯೆಗಳನ್ನು ಪರಿಹರಿಸಲು ಯತ್ನಿಸುವನೋ ಆಗ ಜನರು ಸಹಜವಾಗಿಯೇ ಇಂಥ ನಾಯಕನಲ್ಲಿ ನಿಷ್ಠೆ ಮತ್ತು ಪ್ರೀತಿ ತೋರಿಸುತ್ತಾರೆ. ಅಂತೆಯೇ ನಾಯಕನ ವಿಚಾರಗಳಿಗೆ ಸ್ಪಂದಿಸುತ್ತಾರೆ. ಭಾಷ್ಯಂರವರ ಇಂಥ ಕಾರ್ಮಿಕ ಮುಖಂಡತ್ವ ಕಾಂಗ್ರೆಸ್ ಸಂಸ್ಥೆ ಮೈಸೂರು ದೇಶದಲ್ಲಿ ಹುಟ್ಟಲು ಮತ್ತು ಬೆಳೆಯಲು ತುಂಬ ಅನುಕೂಲ ಮಾಡಿಕೊಟ್ಟಿತು. ಸ್ವಾತಂತ್ರ್ಯದ ಬಗ್ಗೆ ಭಾಷ್ಯಂರವರಂಥ ನಾಯಕರಿಗೆ ಇರುವ ಕಾಳಜಿ ಸ್ವಾಭಾವಿಕವಾಗಿಯೇ ಕಾರ್ಮಿಕರ ಮನೆ-ಮನಗಳನ್ನು ಒಂದು ಗೂಡಿಸಿತು. ಆದ್ದರಿಂದಲೇ ಮೈಸೂರಿನ ಜವಾಬ್ದಾರಿ ಸರ್ಕಾರದ ರಚನೆಯಲ್ಲಿ ಭಾಷ್ಯಂ ಅವರ ಪಾತ್ರ ಹಿರಿದು ಎಂದು ನಾನು ಈ ಮೊದಲು ಹೇಳಿದ್ದು.

ಭಾಷ್ಯಂ ಕಷ್ಟ ಜೀವಿ. ಮೊದಲು ತುಂಬ ಒಳ್ಳೆಯ ಸಂಪಾದನೆ ಇದ್ದವರು. ಆಗ ತಮ್ಮ ಓಡಾಟಕ್ಕೆಂದು ಕಾರ್‌ನ್ನು ಇಟ್ಟುಕೊಂಡಿದ್ದ ವ್ಯಕ್ತಿ. ಆದರೆ ಒಂದು ಬಾರಿ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿ ವಕೀಲಿ ವೃತ್ತಿಯನ್ನು ಬಿಟ್ಟುಕೊಟ್ಟಾಗ ಆರ್ಥಿಕವಾಗಿ ತುಂಬ ಸಂಕಷ್ಟಕ್ಕೀಡಾದರು. ವಕೀಲಿ ವೃತ್ತಿಯ ಸನ್ನದ್‌ನ್ನು ಸರ್ಕಾರವು ವಾಪಸ್ಸು ತೆಗೆದುಕೊಂಡಿತು. ಆ ಸಮಯದಲ್ಲಿ 'ರಾಲ್' ಎಂಬ ಮುಖ್ಯ ನ್ಯಾಯಧೀಶರು ನ್ಯಾಯಸ್ಥಾನದಲ್ಲಿದ್ದು ಭಾಷ್ಯಂ ಅವರಂತೆ ಉಳಿದ ಎಲ್ಲ ರಾಜಕೀಯ ಧುರಿಣರ ಸನ್ನದ್‌ನ್ನೂ ಕಸಿದುಕೊಂಡರು. ಆದರೆ ಭಾಷ್ಯಂ ಅವರ ಕಥೆಯೇ ಬೇರೆ. ಇವರ ಮೇಲೆ ಅಪಾರ ಅಭಿಮಾನವಿಟ್ಟಿದ್ದ ಕನ್ನಡ ಜನತೆ ಇವರನ್ನು ಕೈ ಬಿಡಲಿಲ್ಲ. ಆನಂದರಾವ್ ಸರ್ಕಲ್‌ನಲ್ಲಿದ್ದ ಮಾನಂದ ಹೊಟೇಲಿನ ಮಾಲಿಕರಾದ ಅಪ್ಪಣ್ಣ ಎಂಬವರು ತಾವು ರಾಜಕೀಯದಲ್ಲಿ

ಸಕ್ರಿಯವಾಗಿ ಇಲ್ಲದಿದ್ದರೂ ಕೂಡ ಭಾಷ್ಯಂ ಅವರ ಸ್ಥಿತಿಗೆ ಮರುಗಿ ಅವರಿಗೆ ಎರಡೂ ಹೊತ್ತು ಟಿಫಿನ್ ಕ್ಯಾರಿಯರ್‌ನಲ್ಲಿ ಬಿಸಿಯಾದ ಊಟ ಕಳಿಸುತ್ತಿದ್ದರು.

ನಂತರ ಭಾಷ್ಯಂ ಜನಸಂಪರ್ಕಕ್ಕಾಗಿ ಬೈಸಿಕಲ್ಲಿನಲ್ಲಿ ಓಡಾಡತೊಡಗಿದರು. ಇವರ ಜನಪ್ರಿಯತೆ, ಮೋಡಿಮಾತುಗಳು ಬಹಳಷ್ಟು ಜನರನ್ನು ಇವರತ್ತ ಆಕರ್ಷಿಸಿದವು. ಭಾಷ್ಯಂ ಅವರ ಸಾರ್ವಜನಿಕ ಭಾಷಣಗಳಿಗೆ ಅಸಂಖ್ಯಾತ ಜನರು ಸೇರುತ್ತಿದ್ದರು. ಭಾಷ್ಯಂ ಮನೆಯಂತೆಯೇ ಜೈಲಿನಲ್ಲಿಯೂ ಕೂಡ ಒಂದು ತರಹ ಸಲೀಸಾಗಿ, ಆನಂದದಿಂದ ಇದ್ದುಬಿಡುತ್ತಿದ್ದರು. ಸೆರೆಮನೆಯಲ್ಲಿ ಎಲ್ಲರೊಡನೆ ಹೊಂದಿಕೊಂಡು ಹೋಗುತ್ತಿದ್ದರು. ೧೯೪೨ರಲ್ಲಿ ನಡೆದ ಸತ್ಯಾಗ್ರಹದಲ್ಲಿ ನಾನೂ ಇವರೆಲ್ಲರೊಡನೆ ಭಾಗವಹಿಸಿದ್ದೆ. ಆಗ ಐಯ್ಯಂಗಾರ್ ಅವರು ಕೆಲವು ಬೌದ್ಧಿಕ ತರಬೇತಿಗಳನ್ನೂ ನೀಡುತ್ತಿದ್ದರು ಹಾಗೂ ಎಂ. ಪಿ. ರಾಮರಾಯರು ತರಗತಿ ನಡೆಸುತ್ತಿದ್ದರು. ಭಾಷ್ಯಂ ಕಾರ್ಮಿಕ ಖಾತೆಯನ್ನು ವಹಿಸಿಕೊಂಡಾಗ ಬಿ. ಎಚ್. ಚಂದ್ರಶೇಖರಯ್ಯನವರು ಮಂತ್ರಿಗಳಾಗಿದ್ದರು. ಇವರಿಬ್ಬರೂ ಒಮ್ಮೆ ಒಟ್ಟಿಗೆ ಹೋಗುತ್ತಿದ್ದಾಗ 'ಕಾರ್ಮಿಕರಿಗೆ ಸಂಬಂಧಿಸಿದಂತೆ ಎಷ್ಟೊಂದು ಕಾನೂನುಗಳನ್ನು ತಂದಿದ್ದೀರಿ' ಎಂದು ಕೇಳಿದರು. 'ಐ.ಎಲ್.ಓ ದಲ್ಲಿ ಇದ್ದ ಎಲ್ಲ ಕಾನೂನುಗಳನ್ನು ಮೈಸೂರು ಪ್ರಾಂತ್ಯಕ್ಕೆ ತರುವ ಪ್ರಯತ್ನ ಮಾಡುತ್ತಿದ್ದೇನೆ' ಎಂದು ಭಾಷ್ಯಂ ನಿರಾಳವಾಗಿ ಉತ್ತರಿಸಿದರು. ಅಂದರೆ ಅವರಿಗೆ ಕಾರ್ಮಿಕರ ಕುರಿತು ಅಷ್ಟೊಂದು ಕಾಳಜಿ ಇತ್ತು. ಭಾಷ್ಯಂ ಅವರ ಅನಿಸಿಕೆಯಂತೆ ವಿನೋಬಾ ಭಾವೆ ಅವರ ಕಾನೂನಿಗೆ ಸಂಬಂಧಿಸಿದ ವಿಚಾರ ಸರಿ. ವಿನೋಬಾಜಿ ಹೇಳಿದಂತೆ 'ಕಾನೂನು ಎಷ್ಟಿರಬೇಕು ಎಂದರೆ ದೇಹದಲ್ಲಿ ಮಲವಿದ್ದಷ್ಟೆ ಇರಬೇಕು. ಮಲವಿಲ್ಲದೆ ದೇಹವಾಗುವುದು ಸಾಧ್ಯವಿಲ್ಲ. ಆದರೆ ಸ್ವಲ್ಪ ಮಾತ್ರವೇ ಇರಬೇಕು'. ಕಾನೂನು ಹೆಚ್ಚಾದರೆ, ಈಗ ಆದಂತೆ ಬರಿ ಕಾನೂನಿನ ರಾಜ್ಯವಾಗಿಬಿಡುತ್ತದೆ. ಕಾನೂನು ಬಹಳವಾಗಬಾರದು. ಜನರಲ್ಲಿ ಸ್ವನಿಯಂತ್ರಣವಿರಬೇಕು ಎಂಬುದು ಭಾಷ್ಯಂ ಅವರ ಸ್ಪಷ್ಟ ಅಭಿಪ್ರಾಯವಾಗಿತ್ತು. ಅದಿಲ್ಲವಾದಲ್ಲಿ ಕಾನೂನು ಜನರಿಗೆ ತೀರ ಅಗ್ಗವಾಗಿ ಕಾಲುಕಸವಾಗಿಬಿಡುತ್ತದೆ. ಭಾಷ್ಯಂ ಅವರು ಹೀಗೆ ಕಾರ್ಮಿಕರಿಗಾಗಿ ಎಷ್ಟೊಂದು ಕಾನೂನುಗಳನ್ನು ತಂದರೂ ಈ ಕಾನೂನುಗಳಲ್ಲಿ ಜನಸಾಮಾನ್ಯರ ಬೆರೆಯುವಿಕೆಯನ್ನು ಬಯಸಿದ್ದರು.

ಭಾಷ್ಯಂ ಕಡುಬಡತನವನ್ನು ಅನುಭವಿಸಿದ್ದರು, ನಿಜ. ಆದರೆ ಇಂಥ ದಟ್ಟ ದಾರಿದ್ರ್ಯದಲ್ಲಿಯೂ ಅವರು ನಗು ನಗುತ್ತ ವ್ಯವಹರಿಸಿದರು ಎಂಬುದು ಗಮನೀಯ. ಇವರಿಗೆ ಮಕ್ಕಳಿರಲಿಲ್ಲ. ಹೆಂಡತಿ ತಮಿಳು ನಾಡಿನಿಂದ, ಬಹಳ ಶ್ರೀಮಂತ ಕುಟುಂಬದಿಂದ ಬಂದವರು. ಈ ಗಂಡ ಹೆಂಡಿರ ಪ್ರೀತಿ ನಿಜಕ್ಕೂ ಆದರ್ಶಪ್ರಾಯವಾದುದು. ಇವರಿಗೆ ಎಷ್ಟೇ ಕಷ್ಟವಿದ್ದರೂ ಹೆಂಡತಿಯನ್ನೂ ಸುಖದ ಸುಪ್ಪತ್ತಿಗೆಯಲ್ಲಿ ತೂಗುತ್ತಿದ್ದರು. ಹೆಂಡತಿಯೊಡನೆ ಸ್ನೇಹಿತನಂತೆ ಬಾಳ್ವೆ ಮಾಡಿದವರು. ಇವರ ಮನೆಯಲ್ಲಿ ಒಂದು ಉಯ್ಯಾಲೆ ಇತ್ತು. ಇದರಲ್ಲಿ ಹೆಂಡತಿಯನ್ನು ಕೂಡಿಸಿ ತೂಗುತ್ತಿದ್ದರು. ಹೆಂಡತಿಯ ಬಗ್ಗೆ ಭಾಷ್ಯಂ ಅವರಿಗೆ ತುಂಬ ಗೌರವ, ಪ್ರೀತಿ.

ನಾವು ೧೯೪೨ರಲ್ಲಿ ಜೈಲಿನಲ್ಲಿ ಜೊತೆಗಿದ್ದೆವು. ಬೆಂಗಳೂರು ಕಂಡರೆ ಭಾಷ್ಯಂ ಅವರಿಗೆ ಎಲ್ಲಿಲ್ಲದ ಅಭಿಮಾನ. ಜೈಲಿನಲ್ಲಿರುವಾಗ ಬೆಂಗಳೂರಿನ ಸುಧಾರಣೆ ಕುರಿತು ಇವರು ಮಾತಾಡದ ದಿನಗಳಿರಲಿಲ್ಲ. ಒಮ್ಮೆ ಯಾರೋ ಹೊರಗಿನವರು 'ಸಿಟಿ ಕಾಂಗ್ರೆಸ್' ಗೆ ಅಧ್ಯಕ್ಷರಾದಾಗ ನಮ್ಮನ್ನೆಲ್ಲ

ಕರೆಸಿ "ಏನು, ನೀವೆಲ್ಲ ಇದ್ದೀರಾ ಅಥವಾ ಸತ್ತು ಹೋಗಿದ್ದೀರಾ? ಯಾರೋ ಹೊರಗಿನವರು 'ಸಿಟಿ ಕಾಂಗ್ರೆಸ್‌ಗೆ' ಅಧ್ಯಕ್ಷರಾಗಬೇಕಾ?" ಎಂದು ನಮ್ಮನ್ನು ಗದರಿಸಿದ್ದು ಅವರಿಗೆ ಬೆಂಗಳೂರು ಕುರಿತು ಇದ್ದ ಅಭಿಮಾನವನ್ನು ತೋರಿಸುತ್ತದೆ. ಭಾಷ್ಯಂ ಬೆಂಗಳೂರು ಸುಂದರವಾದ ನಗರವಾಗಬೇಕು ಎಂದು ಸದಾ ಕನಸು ಕಂಡವರು. ಮಿರ್ಜಾ ಸಾಹೇಬರು ಹಾಗೂ ಭಾಷ್ಯಂ ಇಬ್ಬರೂ ಬೆಂಗಳೂರನ್ನು ಸುಂದರವಾಗಿ ಮಾರ್ಪಡಿಸಬೇಕೆಂಬ ವಿಚಾರದಲ್ಲಿ ಬಹಳ ಆಸಕ್ತಿ ಇದ್ದವರು ಹಾಗೂ ಇದೊಂದು ವಿಷಯದಲ್ಲಿ ಭಾಷ್ಯಂ ಅವರಿಗೆ ಮಿರ್ಜಾ ಸಾಹೇಬರ ಕುರಿತು ಅಪಾರ ಗೌರವವಿತ್ತು.

ಭಾಷ್ಯಂ ಅವರ ಭಾಷಣಗಳ ಪ್ರಭಾವದಿಂದಾಗಿ ಕರ್ನಾಟಕದಲ್ಲಿ ಕಾರ್ಮಿಕರು ಅಪಾರ ತ್ಯಾಗವನ್ನು ಮಾಡಿದರು. ದಿನಗೂಲಿಮಾಡಿಕೊಂಡು ತಮ್ಮ ಹಾಗೂ ತಮ್ಮ ಕುಟುಂಬಗಳ ಹೊಟ್ಟೆತುಂಬಿಸಿಕೊಳ್ಳುತ್ತಿದ್ದ ಕೆಲಸಗಾರರು ಕೆಲಸಬಿಟ್ಟು ಚಳವಳಿಗೆ ಇಳಿದರು. ಅನೇಕ ಕಾರ್ಮಿಕರು ಆ ಸಮಯದಲ್ಲಿ ನೌಕರಿಯಿಂದ ಡಿಸ್‌ಮಿಸ್ ಆಗಿ ಬಹಳ ತೊಂದರೆಯನ್ನನುಭವಿಸಬೇಕಾಯಿತು. ಅನೇಕರು ಜೈಲಿಗೂ ಹೋಗಬೇಕಾಯಿತು. ಆದರೆ ಸ್ವಾತಂತ್ರ್ಯ ಬಂದ ನಂತರ ಭಾಷ್ಯಂ ಮೈಸೂರು ಸರ್ಕಾರದಲ್ಲಿ ಕಾರ್ಮಿಕ ಮಂತ್ರಿಗಳಾದ ಮೇಲೆ ಇಂಥ ಕಾರ್ಮಿಕರು ಭಾಷ್ಯಂ ಅವರನ್ನು ಕಂಡು 'ನಾವು ಈ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ದೇಶ ಪ್ರೇಮಿಗಳು. ನಾವು ನಿಮ್ಮ ಜೊತೆ ಸೇರಿದೆವು. ಆಗ ಸ್ವಾತಂತ್ರ್ಯಕ್ಕಾಗಿ ಕಾರ್ಮಿಕರು ಅವರ ಕುಟುಂಬಗಳಿಗೆ ಬಲಿದಾನ ಮಾಡಲು ತಿಳಿಸಿ ಸಮಾಧಾನ ಹೇಳುತ್ತಿದ್ದರು. ಸ್ವಾತಂತ್ರ್ಯ ಬಂದ ನಂತರ ನಮ್ಮ ಕುಟುಂಬಗಳು ಚೆನ್ನಾಗಿರುತ್ತವೆ ಎಂಬ ನಂಬಿಕೆ ಇತ್ತು. ಆದರೆ ಇಂದು ಪರಿಸ್ಥಿತಿ ಹಾಗಿಲ್ಲ' ಎಂದಾಗ ಭಾಷ್ಯಂ ರವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕೆಲಸ ಕಳೆದುಕೊಂಡ, ನಷ್ಟ ಅನುಭವಿಸಿದ ಕಾರ್ಮಿಕರನ್ನು ಪುನಃ ಕೆಲಸಕ್ಕೆ ತೆಗೆದುಕೊಂಡರು.

ಭಾಷ್ಯಂ ಒಬ್ಬ ಮಾನವತಾವಾದಿ. ಒಳ್ಳೆಯ ತಿಳುವಳಿಕೆ ಇದ್ದವರು. ಅವರ ಮಾತಿನ ಮೋಡಿಗೆ ಮರುಳಾಗದವರಿಲ್ಲ. ಕಷ್ಟಗಳನ್ನು ಸಂತೋಷದಿಂದ ಎದುರಿಸಿದ ಧೀಮಂತ ವ್ಯಕ್ತಿ. ಕಾಂಗ್ರೆಸ್ಸಿನಲ್ಲಿ ಒಂದು ಪ್ರಬಲವಾದ ಶಕ್ತಿ. ರಾಜಕೀಯದಲ್ಲಿ ಒಳ್ಳೆಯ ಮುತ್ಸದ್ದಿ, ಆಡಳಿತದಲ್ಲಿ ಒಳ್ಳೆಯ ಪರಿಶ್ರಮ ಇದ್ದವರು. ಒಮ್ಮೆ ಇನ್ನೂ ಸ್ವಾತಂತ್ರ್ಯ ಬಂದಿರಲಿಲ್ಲ. ಆಗ ಹಿಂದು ಮುಸ್ಲಿಂ ಘರ್ಷಣೆಗಳು ಬೆಂಗಳೂರಿನಲ್ಲಿ ನಡೆಯುತ್ತಿದ್ದವು. ಆಗ ಎಮ್. ಶೇಶಾದ್ರಿಯವರು ಗೃಹ ಸಚಿವರಾಗಿದ್ದರು. ಭಾಷ್ಯಂ ಒಬ್ಬ ಕಾಂಗ್ರೆಸ್ ಮುಖಂಡ. ಇವರು ಮನೆಯಲ್ಲಿ ಕುಳಿತು ಶೇಶಾದ್ರಿಯವರಿಗೆ ಸಲಹೆ ಸೂಚನೆಗಳನ್ನು ಕೊಡುತ್ತಿದ್ದರು. ಇದು order ಎಂದರೂ ತಪ್ಪಾಗಲಾರದು. ಹೇಗೆಂದರೆ ಇಂತಹ ಸಮಯದಲ್ಲಿ ಕರ್ಫ್ಯೂ ವಿಧಿಸಿದ್ದಾಗ ಭಾಷ್ಯಂರವರು ಫೋನಿನಲ್ಲಿ "ಏನು ಶೇಷಾದ್ರಿ, ಕರ್ಫ್ಯೂ ಹಾಕಿ ಜನ ಓಡಾಡದಿರುವ ಹಾಗೆ ಮಾಡಿರುವುದು. ಒಬ್ಬ ಭಯೋತ್ಪಾದಕನ ರೀತಿ ಕೆಲಸ ಮಾಡುತ್ತಿದ್ದೀಯಾ. ಜನರಲ್ಲಿ ಭಯ ಉತ್ಪಾದನೆಯಾದರೆ ಶಾಂತಿಯುಂಟಾಗುವುದಿಲ್ಲ. ಜನ ಓಡಾಡಿಕೊಂಡಿರುವ ವ್ಯವಸ್ಥೆ ಮಾಡಬೇಕು. ಆದ್ದರಿಂದ permit ಗಳನ್ನು ಕೊಡು. ಆಗ ನೆಮ್ಮದಿ ಶಾಂತಿ ಇದೆ ಎಂಬ ಭಾವನೆ ಜನರಲ್ಲಿ ಉಂಟಾಗುತ್ತದೆ. ಕರ್ಫ್ಯೂ ವಿಧಿಸುವುದರಿಂದ ಜನ ಮತ್ತಷ್ಟು ಭಯಭೀತರಾಗಿ demoralisation ಆಗುತ್ತದೆ." ಎಂದು ಹೇಳಿದ ಕೂಡಲೆ ಶೇಶಾದ್ರಿಯವರು ಕರ್ಫ್ಯೂ ನಿಯಮಗಳನ್ನು ಸಡಲಿಸಿ permit

ಗಳನ್ನು ಕೊಟ್ಟರು. ಈ ವ್ಯಕ್ತಿ (ಭಾಷ್ಯಂ) ಇದ್ದರೂ ದೊಡ್ಡ ವ್ಯಕ್ತಿ. ಇಲ್ಲದಿದ್ದರೂ ದೊಡ್ಡ ವ್ಯಕ್ತಿ. ಈ ರೀತಿ ಮುತ್ಸದ್ದಿತನ ಹೊಂದಿದ್ದ ವ್ಯಕ್ತಿ, ಮುಂದಾಲೋಚನೆ, ಎಲ್ಲರನ್ನೂ ಸಮಾನವಾಗಿ ನೋಡುವ ವಿಚಾರಗಳನ್ನು ಹೊಂದಿದ್ದ ವ್ಯಕ್ತಿ. ಹಿಡಿದದ್ದನ್ನು ಮಾಡಿ ಮುಗಿಸುವ ಛಾತಿ ಹೊಂದಿರುವ ಇವರಂಥ ವ್ಯಕ್ತಿ ಬೇರೆ ಇರಲಿಲ್ಲ.

ಇವರು ಬೆಂಗಳೂರಿನಲ್ಲಿ ಒಂದೆ ಕಡೆ ಜಮೀನು ಮಾಡಿದ್ದರು. ಅಲ್ಲಿ ಅವರು ಮುಂಜಾನೆ ಆರು ಘಂಟೆಗೆ ಎದ್ದು ನಾಮ ಹಾಕಿಕೊಂಡು, ದೇವರ ಪೂಜೆ ಮಾಡಿಕೊಂಡು ಒಮ್ಮೊಮ್ಮೆ ತೋಟಕ್ಕೆ ಹೋಗಿ ಬರುವವರು. ಈ ಜಮೀನನ್ನು ಹಣ ಮಾಡುವ ದೃಷ್ಟಿಯಿಂದ ಮಾಡಿದ್ದಲ್ಲ. ಅದು ಅಷ್ಟೊಂದು ಫಲವತ್ತಾದ ಭೂಮಿಯೂ ಆಗಿರಲಿಲ್ಲ. ಒಟ್ಟೂ ಇವರಿಗೆ ಆಸಕ್ತಿ ಇದ್ದು ಜಮೀನಿನಲ್ಲಿ ಕೆಲಸ ಮಾಡಿಸುತ್ತಿದ್ದರು. ಎಷ್ಟೆಲ್ಲ ಬಡತನ ಅನುಭವಿಸಿದರೂ ಯಾರ ಹತ್ತಿರವೂ ಹೇಳಿಕೊಂಡವರಲ್ಲ. ಜಯಸಿಂಹ ತಂದೆ ಲಕ್ಷ್ಮೀನರಸು ಹಾಗೂ ಇವರು ಸ್ನೇಹಿತರು ಹಾಗೂ ಸಹಪಾಠಿಗಳು. ಅನೇಕ ಬಾರಿ ಉಡ್‌ಲ್ಯಾಂಡ್ ಹೋಟೆಲಿನಲ್ಲಿ ಕುಳಿತು ಗಂಟೆಗಟ್ಟಲೆ ಚರ್ಚಿಸುತ್ತಿದ್ದರು. ಅವರ ಜೀವನದ ಕೊನೆಯ ದಿನದಂದು ಕೂಡ ಹೀಗೇ ಆಯಿತು. ಅಂದು ಅಮಾವಾಸ್ಯೆ. ತಂದೆಗೆ ತರ್ಪಣ ಕೊಡದೆ ಏನನ್ನೂ ತಿನ್ನುತ್ತಿರಲಿಲ್ಲ. ಆ ದಿನವೂ ಸಹ ಲಕ್ಷ್ಮೀನಸರು ಜೊತೆ ಮಾತು ಮುಗಿಸಿ ಮನೆಗೆ ಬಂದಾಗ ಮನೆಯ ಬಾಗಿಲಲ್ಲಿಯೇ ಹೃದಯಾಘಾತಕ್ಕೆ ಒಳಗಾಗಿ ಕೊನೆಯುಸಿರೆಳೆದರು. ಇವರ ಅಂತ್ಯ ಸಂಸ್ಕಾರ ಬಹಳ ದೊಡ್ಡ ರೀತಿಯಲ್ಲಿ ನಡೆಯಿತು. ಬದುಕಿದ್ದಾಗ ಬಡತನಕ್ಕಾಗಿ ಮರುಗದ ಈ ಜೀವ ಸಾವಿನಲ್ಲಿ ಜನರ ಶ್ರೀಮಂತಿಗೆಯಲ್ಲಿ ಲೀನವಾಯಿತು.''

**೪) ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪ, ಬೆಂಗಳೂರು.** (ಕರ್ನಾಟಕ ರತ್ನ ಶ್ರೀ ಎಸ್. ನಿಜಲಿಂಗಪ್ಪನವರು ರಾಷ್ಟ್ರೀಯ ನಾಯಕರು, ಕರ್ನಾಟಕ ಮಾಜಿ ಮುಖ್ಯ ಮಂತ್ರಿಗಳು ಹಾಗೂ ಅಖಿಲ ಭಾರತ ಕಾಂಗ್ರೆಸ್ಸಿನ ಹಿಂದಿನ ಅಧ್ಯಕ್ಷರು. ಶ್ರೀ ನಿಜಲಿಂಗಪ್ಪನವರು ಆಧುನಿಕ ಕರ್ನಾಟಕ ರಾಜ್ಯದ ನಿರ್ಮಾಣದಲ್ಲಿ ಅಗ್ರಗಣ್ಯ ಪಾತ್ರ ವಹಿಸಿದ್ದಾರೆ. ಇಂದಿಗೂ ಅವರು ಕರ್ನಾಟಕ ರಾಜಕೀಯ ಕ್ಷೇತ್ರದಲ್ಲಿ ಅತ್ಯಂತ ಮಹತ್ವದ ವ್ಯಕ್ತಿಗಳಲ್ಲಿ ಒಬ್ಬರು. ಕೆ. ಟಿ. ಭಾಷ್ಯಂ ಅವರನ್ನು ಅತಿ ನಿಕಟವಾಗಿ ಬಲ್ಲ ನಿಜಲಿಂಗಪ್ಪನವರು ಶ್ರೀ ವಿ. ಎಸ್. ನಾರಾಯಣ ರಾವ್ ಅವರು ಬರೆದ 'ಕೆ. ಟಿ. ಭಾಷ್ಯಂ ಅಯ್ಯಂಗಾರ್ (ಜೀವನ ಚರಿತ್ರೆ)' ಎಂಬ ಮಹತ್ವದ ಗ್ರಂಥಕ್ಕೆ ಮುನ್ನಡಿ ಬರೆಯುತ್ತ ಭಾಷ್ಯಂ ಕುರಿತು ಹಲವು ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ. ಆ ಮುನ್ನುಡಿಯಿಂದ ಆಯ್ದುಕೊಂಡ ಕೆಲವು ವಿಚಾರಗಳನ್ನು ಈ ಕೆಳಗೆ ನೀಡಲಾಗಿದೆ.)-

ಸುಮಾರು ಅರ್ಧ ಶತಮಾನದ ಹಿಂದಿನ ಮಾತು. ಮೈಸೂರು ಕಾಂಗ್ರೆಸ್ ಮಹಾತ್ಮಾ ಗಾಂಧಿಯವರ ಪ್ರಭಾವಕ್ಕೆ ಒಳಗಾಗಿ ಬ್ರಿಟಿಷ್ ಇಂಡಿಯಾದಲ್ಲಿ ಸ್ವರಾಜ್ಯ ಸಾಧನೆಗಾಗಿ ಹೋರಾಟ ನಡೆಸಿದ್ದರೆ, ಮೈಸೂರು ಮತ್ತು ಇತರ ರಾಜರುಗಳ ಮತ್ತು ನವಾಬರುಗಳ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಅದೇ ಸತ್ಯ ಅಹಿಂಸಾ ತತ್ವಗಳ ಆಧಾರದ ಮೇಲೆ ಹೋರಾಟ ನಡೆಸಿತ್ತು. ಅವುಗಳಲ್ಲಿ ಮೈಸೂರಿಗೆ ಪ್ರಥಮ ಸ್ಥಾನ ಇದ್ದು ಎಲ್ಲಾ ಕಡೆಗಳಲ್ಲಿಯೂ ಚಳವಳಿ ನಡೆದಿತ್ತು. ಸ್ವಾಭಾವಿಕವಾಗಿ ಬೆಂಗಳೂರೇ ಕೇಂದ್ರ ಸ್ಥಾನ. ಕಾಂಗ್ರೆಸ್ ಬಹಿರಂಗ ಸಭೆಗಳು ನಡೆಯುತ್ತಿದ್ದವು. ಬಹಿರಂಗ ಸಭೆಯಲ್ಲಿ ಶ್ರೀ ಕೆ. ಟಿ. ಭಾಷ್ಯಂರವರ ಭಾಷಣ ಎಂದರೆ ಆ

ಸಾಯಂಕಾಲ ಈ ಗೊತ್ತಾದ ಸ್ಥಳಗಳಲ್ಲಿ ಸಾವಿರಾರು ಜನರು, ಸಮಯಕ್ಕೆ ಮೊದಲೆ ಕಿಕ್ಕಿರಿದು ತುಂಬಿರುತ್ತಿದ್ದರು. ಭಾಷ್ಯಂ ಅಯ್ಯಂಗಾರರ ಭಾಷಣವೆಂದರೆ ಜನಗಳಿಗೆ ಅಷ್ಟು ಅಚ್ಚುಮೆಚ್ಚು ಅಷ್ಟು ಸೊಗಸು. ಜನ ಪ್ರಭಾವಿತರಾಗುತ್ತಿದ್ದುದು ಭಾಷ್ಯಂ ಅವರ ಭಾಷಣದ ಪರಿಣಾಮ. ಅವರಂತೆ ಮಾತನಾಡಬಲ್ಲ ಕಾಂಗ್ರೆಸ್ ಮುಖಂಡರುಗಳು ಚೆಂಗಲ್ ರಾಯರೆಡ್ಡಿ, ಟಿ. ಸುಬ್ರಮಣ್ಯಂ, ಎಚ್. ಸಿದ್ದಯ್ಯ, ಕೆ. ಪಟ್ಟಾಭಿರಾಮನ್, ಟಿ. ಸಿದ್ದಲಿಂಗಯ್ಯ ಮುಂತಾದವರು. ಅವರೆ ಭಾಷ್ಯಂ ಅವರಿಗೆ ಪ್ರಥಮ ಪಟ್ಟಿ.

ಬೆಂಗಳೂರು ಪತ್ರಿಗಿರಣಿ ಕೆಲಸಗಾರರ ಒಂದು ಸಂಘವನ್ನು ೧೯೩೭ರಲ್ಲಿ ಕಟ್ಟಿ ಸಂಘದ ಮೂಲಕ ಕಾರ್ಮಿಕರು ಸಂಘಟಿತರಾಗುವಂತೆ ಸಂಘಟನೆ ಮಾಡಿದ ಪ್ರಥಮ ಅಧ್ಯಕ್ಷರು ಶ್ರೀ ಭಾಷ್ಯಂರವರು. ಸಂಘವನ್ನು ಸ್ಥಾಪಿಸಿದಂದಿನಿಂದ ೧೯೪೫ರವರೆಗೂ ಅಧ್ಯಕ್ಷರಾಗಿಯೇ ಇದ್ದರು. ೧೯೪೭ನೇ ಫೆಬ್ರವರಿಯಲ್ಲಿ ಕಾರ್ಮಿಕರ ಕಾನೂನುಬದ್ಧವಾದ ಸಂಘಟನೆಗಾಗಿ ಮೈಸೂರು ಕಾರ್ಮಿಕರ ಶಾಸನ ಅಧಿಕೃತವಾಗಿ ಬರಲು ಸರ್ಕಾರದ ಮೇಲೆ ಒತ್ತಾಯತರಲು ಶ್ರೀ ಭಾಷ್ಯಂರವರೇ ಕಾರಣ.

ಮೈಸೂರು ಕಾಂಗ್ರೆಸ್ಸನ್ನು ಬಲಪಡಿಸುವುದರಲ್ಲಿ ಭಾಷ್ಯಂ ಅವರದು ಪ್ರಮುಖ ಪಾತ್ರ. ಅವರು ಕಾರ್ಯಕಾರಿ ಸಮಿತಿಯಲ್ಲಿ ಮೊದಲಿನಿಂದಲೂ ಸದಸ್ಯರು. ಸತ್ಯಾಗ್ರಹ ಠರಾವುಗಳಲ್ಲಿ ಅವರು ಮುಂದಾಳಾಗಿರುತ್ತಿದ್ದರಷ್ಟೇ ಅಲ್ಲ ಅತ್ಯಂತ ಸ್ವಾರ್ಥ ತ್ಯಾಗವೂ ಅವರದು. ಕಾನೂನು ಭಂಗ ಮಾಡಿದರೆಂಬ ಕಾರಣದಿಂದ ಇತರೆ ಕೆಲವರೊಡನೆ ಅವರ ಸನ್ನದ್ದನ್ನೂ ಮೈಸೂರು ಹೈಕೋರ್ಟ್ ಕಿತ್ತುಕೊಂಡು ಅವರ ಜೀವನ ವೃತ್ತಿ ಮೊಟಕು ಮಾಡಿತು. ಹಾಗೆ ಜೀವನದ ವೃತ್ತಿಯನ್ನೇ ಕಳೆದುಕೊಂಡ ೮-೧೦ ಜನರಲ್ಲಿ ಭಾಷ್ಯಂರವರೊಬ್ಬರು. ಕಾರಾಗೃಹವಾಸ ಅವರಿಗೇನೂ ಹೊಸದಲ್ಲ. ಅನೇಕ ಸಾರಿ ಕಾರಾಗೃಹಕ್ಕೆ ಹೋಗಿ ಬಂದರು.

ಮೈಸೂರು ಕಾಂಗ್ರೆಸ್ಸಿನ ವ್ಯಾಪ್ತಿ ಪ್ರಭಾವ ಶಕ್ತಿ ಬೆಳೆಯಿತು. ವಿದುರಾಶ್ವತ್ಥ ಗೋಲಿಬಾರು, ಶಿವಪುರದ ಸತ್ಯಾಗ್ರಹ, ಸತ್ಯಾಗ್ರಹಿಗಳ ದಸ್ತಗಿರಿ, ಶಿಕ್ಷೆಗಳು, ಜೈಲುವಾಸ ಒಂದರ ಹಿಂದೊಂದು ನಡೆಯುತ್ತ ಹೋದವು. ಜನರು ಮೈಸೂರು ಕಾಂಗ್ರೆಸ್ಸಿಗೆ ನಿರೀಕ್ಷೆಗಿಂತ ಹೆಚ್ಚಿನ ಬೆಂಬಲ ತೋರಿಸುತ್ತಿದ್ದರು. ಮೈಸೂರು ಕಾಂಗ್ರೆಸ್ಸಿನ ಪ್ರಥಮ ವಾರ್ಷಿಕ ಅಧಿವೇಶನವು ಶ್ರೀ ಸಿದ್ದಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ೧೯೩೮ರಲ್ಲಿ ಶಿವಪುರದಲ್ಲಿ ಯಶಸ್ವಿಯಾಗಿ ನಡೆಯಿತು. ಎರಡನೆಯ ಅಧಿವೇಶನವು ಶಿವಮೊಗ್ಗೆಯಲ್ಲಿ. ಭಾಷ್ಯಂ ಅವರೇ ಅದರ ಅಧ್ಯಕ್ಷರು. ಶಿವಮೊಗ್ಗೆ ಜಿಲ್ಲೆಯ ಜನ ತೋರಿಸಿದ ಅಭಿಮಾನ ಹೊಗಳತಕ್ಕದ್ದು. ಮೆಚ್ಚತಕ್ಕದ್ದು. ಭಾಷ್ಯಂ ಅವರ ಅಧ್ಯಕ್ಷತೆ ಅತ್ಯಂತ ಯಶಸ್ವಿಯಾಗಿತ್ತು.

ಮೈಸೂರು ಕಾಂಗ್ರೆಸ್ ಕಚೇರಿಯ ಎದುರಿಗೆ ಇದ್ದ ಇವರ ಮನೆಗೆ ನಾವು ಯಾವಾಗಲೂ ಹೋಗುತ್ತಿದ್ದೆವು. ಇವರ ಕುಟುಂಬ ಮದರಾಸಿನ ಶ್ರೀಮಂತರ ಮನೆಯ ಮಗಳು. ಮಕ್ಕಳಿರಲಿಲ್ಲವಾದರೂ ದಾಂಪತ್ಯ ಜೀವನ ಸುಖಮಯವಾಗಿತ್ತು. ಭಾಷ್ಯಂ ಹೋದವರಿಗೆಲ್ಲ ಕಾಫಿ ಕುಡಿಸಿಯೇ ಕಳುಹಿಸಬೇಕು. ನಾವುಗಳು ಯಾರಾದರೂ ಹೋದದ್ದೇ ತಡ, "ನರಸಿಂಹ ಕಾಫಿ ಕೊಂಡುವಾಡ" ಎಂದಾಗ ಕಾಫಿ ಬರುತ್ತಿತ್ತು. ಕುಡಿದು ಬರುತ್ತಿದ್ದೆವು.

ಶ್ರೀಮತಿ ಕಲ್ಯಾಣಮ್ಮ, ಭಾಷ್ಯಂ ಅವರು ಮೈತುಂಬಾ ಒಡವೆಗಳನ್ನಿಟ್ಟುಕೊಂಡು ಹಾಲಿನಲ್ಲಿ ತೂಗು ಮಂಚದ ಮೇಲೆ ಕೂತಿರುತ್ತಿದ್ದರು. ಹೋದವರನ್ನೆಲ್ಲಾ "ಯಾವಾಗ ಬಂದಿರಿ, ಚೆನ್ನಾಗಿದ್ದೀರಾ, ನಿಮ್ಮ ಮನೆಯಲ್ಲಿ ಎಲ್ಲರೂ ಹೇಗಿದ್ದಾರೆ" ಎಂದು ಅವರನ್ನು ನೋಡಿ ಸೌಜನ್ಯದಿಂದ ಮಾತನಾಡಿಸುತ್ತಿದ್ದುದೇ ನನಗೊಂದು ಸಂತೋಷವೆನಿಸುತ್ತಿತ್ತು.

ಮನೆ ಜೊತೆ ಅವರಿಗೆ ಬೆಂಗಳೂರು ಹತ್ತಿರ ಒಂದು ಜಮೀನೂ ಇತ್ತು. ಅದನ್ನು ಮಾಡುತ್ತಿದ್ದ ತನ್ನ ರೈತರು ಹೇಳಿದ್ದನ್ನು ನಂಬುವ ದೊಡ್ಡ ಮನಸ್ಸು ಇತ್ತು. ರೈತನ ಬಗ್ಗೆ ಧಾರಾಳತನದಿಂದಿದ್ದರು. ಆಗಿಂದಾಗ್ಗೆ ಎತ್ತು ಸತ್ತು ಹೋಯಿತು, ಮಳೆ ಸಾಕಷ್ಟಾಗಲಿಲ್ಲ, ಪೈರಿಗೆ ರೋಗ ಬಿದ್ದಿದೆ, ಬೆಳೆ ನಾಶವಾಗಿದೆ, ವಗೈರೆ ಸುಳ್ಳು ಹೇಳಿ ರೈತ ದುಡ್ಡು ವಸೂಲಿ ಮಾಡುತ್ತಿದ್ದುದು ನಮಗೆಲ್ಲ ಗೊತ್ತಿದ್ದ ಮಾತು. ಅವರಿಗೆ ಮಾತ್ರ ತಿಳಿಯುತ್ತಿರಲಿಲ್ಲ. ಅಂತೂ ಆ ಜಮೀನಿನಿಂದ ಖಿಕ್ಕಾನೇ ಹೊರತು ಲಾಭವೇನೂ ಇದ್ದಂತೆ ಕಾಣಲಿಲ್ಲ. ವೃತ್ತಿ ಕಳೆದುಕೊಂಡು ಧಾರಾಳತನದ ಜೀವನ ಮುಂತಾದ ಕಾರಣಗಳಿಗಾಗಿ ಅವರು ದೈವಾಧೀನರಾದಾಗ ಸಾಲವಂತರಾಗಿದ್ದರೆಂದೂ, ಆ ಮನೆ ಮಾರಾಟ ಮಾಡಬೇಕಾಯಿತೆಂದೂ ತಿಳಿಯಿತು. ಇರಲು ಮನೆಯಿಲ್ಲದೆ ಬಡತನವೇ ತಿಳಿಯದ ಯಾವ ಕಷ್ಟಗಳನ್ನೂ ಅರಿಯದ ಶ್ರೀಮತಿ ಭಾಷ್ಯಂರವರು ಜಗದ್ಗುರು ಶಂಕರಾಚಾರ್ಯರ ಮಠದ ಮುಂಭಾಗದಲ್ಲಿರುವ ಸಣ್ಣ ಮನೆಯೊಂದರಲ್ಲಿ ೨೫೦ ರೂಪಾಯಿ ಬಾಡಿಗೆಗೆ ಇರಬೇಕಾಗಿಯೂ ಅವರನ್ನು ಅವರ ಕಡೆಯ ತಮ್ಮ (ಸುಂದರ್) ಗೋಪಾಲ ಕೃಷ್ಣ ನೋಡಿಕೊಂಡನೆಂದೂ ತಿಳಿಯಿತು.

ರಾಷ್ಟ್ರಸೇವೆಗಾಗಿ ದುಡಿದ ಇಂಥಹವರ ಜೀವನಕ್ಕೂ ಈಗಿನ ಕೇಂದ್ರ ಮತ್ತು ರಾಜ್ಯ ಮಂತ್ರಿಗಳ ಜೀವನಕ್ಕೂ ಎಷ್ಟು ಅಂತರ. ದೇಶಕ್ಕಾಗಿ, ಜನರ ಉದ್ಧಾರಕ್ಕಾಗಿ ಮಾಡಿದ ಸರ್ವತ್ಯಾಗವೆಲ್ಲಿ, ಸ್ವಾರ್ಥಕ್ಕಾಗಿ ಅಧಿಕಾರ ದುರುಪಯೋಗಿಸಿಕೊಂಡು ಭಿಕಾರಿಗಳಾಗಿದ್ದವರು ಕೋಟ್ಯಾಧೀಶರಾಗಿ ಸುಖಲೋಪ್ತರಾಗಿರುವ ಬಹುಸಂಖ್ಯೆಯ ಈಗಿನ ಸ್ವಾರ್ಥಿಗಳನ್ನು ಜನ ತಿಳಿಯಬೇಕು.

ಭಾಷ್ಯಂ ಅವರೊಡನೆ ಮಾತನಾಡುವುದೇ ಒಂದು ಸಂತೋಷವಾಗುತ್ತಿತ್ತು. ಯಾವಾಗಲೂ ಸಂತೋಷದಿಂದಲೇ ಎಲ್ಲರನ್ನೂ ಬರಮಾಡಿಕೊಂಡು ಯಾವಾಗಲೂ ಹಸನ್ಮುಖಿಗಳಾಗಿ ವಿಚಾರಿಸುತ್ತಿದ್ದರು. ಹಾಸ್ಯದ ಚಟಾಕಿಗಳು ಒಂದರ ಹಿಂದೆ ಒಂದು ಬರುತ್ತಿದ್ದವು. ಅವರು ಸಿಟ್ಟಾಗುತ್ತಿದ್ದುದು ಅತಿ ವಿರಳ. ನಾನು ಅಷ್ಟೊಂದು ವರ್ಷಗಳು ಜೊತೆ ಜೊತೆಯಲ್ಲೇ ಕೆಲಸ ಮಾಡಿದ್ದರೂ ಸಿಟ್ಟಾಗಿ ಮುಖ ಕೆಡಿಸಿಕೊಂಡಿದ್ದು ಜ್ಞಾಪಕವಿಲ್ಲ. ಜೊತೆಗೆ ಬುದ್ಧಿವಂತರು.

ಭಾಷ್ಯಂ ಅವರ ಒಂದು ವಿಚಾರ, ಮನೆಬಿಟ್ಟು ಒಂದು ದಿನವೂ ಬೇರೆಲ್ಲಿಯೂ ಇರಲು ಇಷ್ಟಪಡುತ್ತಿರಲಿಲ್ಲ. ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ಮೈಸೂರಿನಲ್ಲಿ ಎಲ್ಲಿಯೇ ಇರಲಿ, ಯಾವ ಜಿಲ್ಲೆಯಲ್ಲಿಯೇ ಇರಲಿ ಪ್ರವಾಸ ಮಾಡುತ್ತಿರಲಿ ಅದೇ ದಿನವೇ ಬೆಂಗಳೂರಿಗೆ ಹಿಂತಿರುಗಬೇಕು. ಎಷ್ಟೋ ಸಲ ನೂರಾರು ಮೈಲಿ ದೂರದಿಂದ ಬೆಂಗಳೂರಿಗೆ ಬಂದೇ ಬರುತ್ತಿದ್ದರು. ನಾವೆಲ್ಲ ಮಾತನಾಡಿ ಹಾಸ್ಯ ಮಾಡುತ್ತಿದ್ದೆವು.

ಒಟ್ಟಿನಲ್ಲಿ ನಮ್ಮಗಳ ಮೈಸೂರಿನ ಹೋರಾಟದಲ್ಲಿ ಭಾಷ್ಯಂ ಅವರ ಸ್ಥಾನ ಅತ್ಯಂತ ದೊಡ್ಡದು. ಚರಿತ್ರೆಕಾರರು ಚರಿತ್ರೆಯನ್ನು ಬರೆಯುವಾಗ ಅವರಿಗೆ ಪ್ರಾಶಸ್ತ್ಯ ಕೊಡಬೇಕು. ನಮ್ಮ ಹೋರಾಟ ಆಗ್ಗೆ ಮೈಸೂರು ರಾಜ್ಯಕ್ಕೆ ಸಂಬಂಧಪಟ್ಟಿದ್ದರು ಸಹ ಸಮಗ್ರ ಹಿಂದೂಸ್ಥಾನದ ಸ್ವಾತಂತ್ರ್ಯ ಹೋರಾಟದಲ್ಲಿ ಅತ್ಯಂತ ಪ್ರಾಮುಖ್ಯವಾದುದು. ಅದರಲ್ಲಿ ಭಾಷ್ಯಂ ಅವರ ಸ್ಥಾನವೂ ಅಷ್ಟೇ ಚರಿತ್ರಾರ್ಹವಾದುದು. ಅಂತಹ ಮುಖಂಡರು ಸಿಕ್ಕುವುದು ಅಪರೂಪ. ಬೆಂಗಳೂರಿನಲ್ಲಿ ಶಾಶ್ವತವಾಗಿ ಉಳಿಯುವಂತ ಅವರ ಪುಸ್ಥಳಿಯನ್ನು ಯೋಗ್ಯವಾದ ಸ್ಥಾನದಲ್ಲಿ ಈಗಿನ ಆಡಳಿತಗಾರರು ಸ್ಥಾಪಿಸುವರೆಂದು ನಂಬುತ್ತೇನೆ. ಬೆಂಗಳೂರಿನ ನಾಗರೀಕರಿಗೆ ಅವರ ಹೆಸರು ಪವಿತ್ರ.

೫. **ಶ್ರೀ ಗಿರಿಮಾಜಿ ರಾಜಗೋಪಾಲ್, ಶಿವಮೊಗ್ಗ** (ಶ್ರೀ ರಾಜಗೋಪಾಲ್ ಗಿರಿಮಾಜಿಯವರು ಮಲೆನಾಡು ಪ್ರದೇಶದ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಒಬ್ಬರು. ೧೯೪೦ರ ದಶಕದಲ್ಲಿ ಮೈಸೂರು ಪ್ರಾಂತ್ಯದಲ್ಲಿ ಜವಾಬ್ದಾರಿ ಸರ್ಕಾರದ ರಚನೆಗೆಂದು ಹೋರಾಟ ಮಾಡಿದ ಶ್ರೀ ಗಿರಿಮಾಜಿಯವರು ಇಂದು 'ನ್ಯಾಷನಲ್ ಎಜುಕೇಶನಲ್ ಸೊಸೈಟಿ, ಶಿವಮೊಗ್ಗ' ಈ ಸಂಸ್ಥೆಯ ನಿರ್ದೇಶಕ ಮಂಡಳಿಯ ಪ್ರಮುಖ ಸದಸ್ಯರಾಗಿ ನೂರಾರು ವಿದ್ಯಾರ್ಥಿ-ವಿದ್ಯಾರ್ಥಿನಿಯರ ಭವಿಷ್ಯ ನಿರ್ಮಿಸುವಲ್ಲಿ ತೊಡಗಿಕೊಂಡಿದ್ದಾರೆ. ತಮ್ಮ ತಾರುಣ್ಯದಿಂದಲೇ ನಿಷ್ಠಾವಂತ ಹಾಗೂ ದಿಟ್ಟ ಹೋರಾಟಗಾರ ಕಾಂಗ್ರೆಸ್ಸಿಗರೆನಿಸಿದ ರಾಜಗೋಪಲ್ ಗಿರಿಮಾಜಿಯವರು ಕೆ. ಟಿ. ಭಾಷ್ಯಂ ಅವರನ್ನು ತುಂಬ ಹತ್ತಿರದಿಂದ ನೋಡಿದವರು. ಭಾಷ್ಯಂ ಕುರಿತಾದ ಅವರ ವೈಯುಕ್ತಿಕ ಅನಿಸಿಕೆಗಳಲ್ಲಿ, ಭಾಷ್ಯಂ ಅವರೊಂದಿಗಿನ ಅನುಭವಗಳಲ್ಲಿ, ಕೆಲವನ್ನು ಕೆಳಗಿನ ಪುಟಗಳಲ್ಲಿ ತೆರೆದಿಡಲಾಗಿದೆ.):-

"ನಾನು ಮೊದಲನೆಯ ಬಾರಿ ಭಾಷ್ಯಂರವರನ್ನು ಕಂಡಿದ್ದು ನನ್ನ-ಅವರ ಶಿವಮೊಗ್ಗ ಸೆರೆಮನೆ ವಾಸದ ಸಂದರ್ಭದಲ್ಲಿ. ಆಗ ನನ್ನ ವಯಸ್ಸು ಸುಮಾರು ೧೯-೨೦ ವರ್ಷಗಳಿರಬಹುದು. ನಾವೆಲ್ಲ ಸತ್ಯಾಗ್ರಹಿಗಳು ಸೇರಿ ಬ್ರಿಟಿಷ್ ಸರ್ಕಾರದ ವಿರುದ್ಧ ಘೋಷಣೆಗಳನ್ನೂ ಮತ್ತು ಭಾರತೀ ಸ್ವಾತಂತ್ರ್ಯ ಹೋರಾಟದ ಜೈಕಾರವನ್ನೂ ಕೂಗುತ್ತಿದ್ದೆವು. ಆ ದಿನದ ಚಳವಳಿಯಲ್ಲಿ ಸುಮಾರು ೨೦೦೦ ಜನರಿದ್ದಿರಬಹುದು. ಆಗ ಪೋಲೀಸರು ನಮ್ಮನ್ನು ನಿಗ್ರಹಿಸಲು ಲಾಠಿ ಚಾರ್ಜ್ ಮಾಡಿದರು. ಅನೇಕರಿಗೆ ಹಿಗ್ಗಾ-ಮುಗ್ಗಾ ಹೊಡೆದರು. ನಂತರ ಎಲ್ಲರನ್ನೂ ಒಂದು ಸ್ಥಳದಲ್ಲಿ ಸೇರಿಸಿ ಕೂಡಿಟ್ಟರು. ಆಮೇಲೆ ಜೈಕಾರ ಹಾಕಿದವರು ಯಾರು ಎಂದು ಪ್ರಶ್ನಿಸಿದಾಗ ನಾನು ಮತ್ತು ಶಿವಮೊಗ್ಗಾದ ಇನ್ನೊಬ್ಬ ಸ್ವಾತಂತ್ರ್ಯ ಯೋಧ ಭೋಪಾಳಂ ಕೃಷ್ಣಮೂರ್ತಿ ಇಬ್ಬರೂ ನಾವು ಘೋಷಣೆ ಕೂಗಿದ್ದೆಂದು ಹೇಳಿದೆವು. ನಮ್ಮಿಬ್ಬರನ್ನೂ ಕೋರ್ಟ್ ಮಾರ್ಶಲ್ ಮಾಡಿ ಬೆಂಗಳೂರಿನಿಂದ ಸೆರೆಹಿಡಿದು ತಂದಿದ್ದ ಸುಮಾರು ೨೦ ಹಿರಿಯ ಸತ್ಯಾಗ್ರಹಿಗಳ ಜೊತೆಗೆ ಬ್ಯಾರಕ್‌ನಲ್ಲಿ ಇಟ್ಟರು. ನಾವೆಲ್ಲರೂ ಪ್ರತಿಭಟಿಸಿ ಅನಿರ್ದಿಷ್ಟ ಅವಧಿಯ ಉಪವಾಸ ಸತ್ಯಾಗ್ರಹವನ್ನು ಪ್ರಾರಂಭಿಸಿದೆವು. ಆ ಗುಂಪಿನಲ್ಲಿ ಭಾಷ್ಯಂ ಅಯ್ಯಂಗಾರ್ ಕೂಡ ಇದ್ದರು. ಹೀಗೆ ನಾನು ಭಾಷ್ಯಂ ಅವರನ್ನು ಮೊದಲ ಬಾರಿಗೆ ಭೇಟಿಯಾದೆ. ಈ ಮೊದಲ ಭೇಟಿಯೆ ನನ್ನ ಮೇಲೆ ಅಸಾಧಾರಣ ಪ್ರಭಾವಬೀರಿತ್ತು. ಆ ಉಪವಾಸ ಸತ್ಯಾಗ್ರಹವನ್ನು ಜೇಲಿನ ಅಧಿಕಾರಿಗಳ ಜೊತೆಗೆ ಚರ್ಚೆ ಮಾಡಿದ ಮೇಲೆ ನಾವು ನಿಲ್ಲಿಸಿದೆವಾದರೂ ಆ ಚರ್ಚೆಯ ಸಮಯದಲ್ಲಿ ಭಾಷ್ಯಂ

ಅಯ್ಯಂಗಾರ್‌ರವರು ತೋರಿಸಿದ ಸ್ವಾಭಿಮಾನ, ಕರ್ತವ್ಯ ಪ್ರಜ್ಞೆ ಹಾಗೂ ಉಳಿದ ಸತ್ಯಾಗ್ರಹಿಗಳ ಕುರಿತಾದ ಪ್ರೀತಿ ಇವು ನನ್ನೊಂದಿಗೆ ಬಹುಕಾಲ ಉಳಿದವು.

ಇದೇ ಸಮಯದಲ್ಲಿ ನಡೆದ ಇನ್ನೊಂದು ಘಟನೆಯೂ ನನಗೆ ಭಾಷ್ಯಂ ಅವರ ವಿಚಾರದಲ್ಲಿ ಇದ್ದ ಗೌರವಾದರಗಳನ್ನು ದ್ವಿಗುಣಗೊಳಿಸಿತು. ನಮ್ಮೆಲ್ಲರನ್ನೂ ಕೆಂಗೇರಿಯ ಹತ್ತಿರದಲ್ಲಿ ಡ್ಯಾಂ ಒಂದನ್ನು ಕಟ್ಟಲೆಂದು ಕರೆದುಕೊಂಡು ಹೋಗುತ್ತಿದ್ದರು. ನಾವು ನೂರಾರು ಜನ ಗುದ್ದಲಿ, ಸಲಿಕೆ, ಪಿಕಾಸು. ಹಾರೆಗಳನ್ನು ಹಿಡಿದುಕೊಂಡು ಸುಮಾರು ಎರಡು ಮೈಲಿ ದೂರ ನಡೆದುಕೊಂಡು ಹೋಗಿ ಕೆಲಸ ಮಾಡುತ್ತಿದ್ದೆವು. ಐದೈದು ಜನರ ಒಂದೊಂದು ಗುಂಪು. ಭಾಷ್ಯಂ ಕೂಡ ಹಿರಿಯರಾಗಿದ್ದೂ ನಮ್ಮ ಜೊತೆಗೆ ದುಡಿದರು. ನಮಗೆಲ್ಲ ಏಳುವರೆ ತಿಂಗಳ ಶಿಕ್ಷೆಯಾದರೆ ಭಾಷ್ಯಂ ಅವರಿಗೆ ನಾಲ್ಕೂವರೆ ತಿಂಗಳ ಶಿಕ್ಷೆಯಾಗಿದ್ದರಿಂದ ಅವರಿಗೆ ನಮಗಿಂತ ಮೊದಲೇ ಬಿಡುಗಡೆಯಾಗಿತ್ತು. ಶಿಕ್ಷೆ ಮುಗಿದ ಕೂಡಲೆ ಬಸ್ಸು ಹತ್ತಿ ನಾನು ನೇರವಾಗಿ ಭಾಷ್ಯಂ ಅವರ ಮನೆಗೆ ಹೋದೆ. ನನ್ನನ್ನು ನೋಡಿದವರೇ ಭಾಷ್ಯಂ ಭಾವಪರವಶರಾದರು. ಅವರು ಆಗ ಹೇಳಿದ ಮಾತು ಇಂದಿಗೂ ನನ್ನ ಕಿವಿಯಲ್ಲಿ ಗುಂಯ್ಗುಡುತ್ತಿದೆ. "ರಾಜಗೋಪಾಲ್, ನೀವೆಲ್ಲ ಸೆರೆಮನೆಯಲ್ಲಿದ್ದಿರಿ. ನಮ್ಮನ್ನೆಲ್ಲ ಮೊದಲೇ ಬಿಟ್ಟುಬಿಟ್ಟರು ನಿಜ. ಆದರೆ ನಿಮ್ಮಂಥ ಕಾರ್ಯಕರ್ತರಿಲ್ಲದೆ ಕಾಂಗ್ರೆಸ್ಸು ಸಂಪೂರ್ಣ ನಿಷ್ಕ್ರಿಯವಾಗಿದೆ. ನಿಷ್ಠಾವಂತ ಕಾರ್ಯಕರ್ತರಿಲ್ಲದಿದ್ದರೆ ಉಳಿದ ಧುರೀಣರಿದ್ದೂ ಏನು ಪ್ರಯೋಜನ?" ಭಾಷ್ಯಂ ಮುಂದುವರೆದು ಹೀಗೆ ಹೇಳಿದರು. "Mirza Ismail is not even prepared to address me as Congress President. ಭಾಷ್ಯಂ, ಕಾಟನ್ ಪೇಟ್, ಬೆಂಗಳೂರು ಎಂದು ಕಾಗದ ಬರೆಯುತ್ತಾನೆಯೇ ಹೊರತು ಭಾಷ್ಯಂ, ಕಾಂಗ್ರೆಸ್ ಪ್ರೆಸಿಡೆಂಟ್ ಎಂದೂ ಕೂಡ ಬರೆಯುವುದಿಲ್ಲ ಅವನು. ಹೀಗಾಗಿದೆ ನಮ್ಮ ಸ್ಥಿತಿ" ಎಂದು ಹೇಳುತ್ತಾ ದೊಡ್ಡ ಲೋಟದಲ್ಲಿ ಕಾಫಿ ತಂದಿತ್ತರು. ಕಾಂಗ್ರೆಸ್ಸು ಒಂದು ಸಂಸ್ಥೆಯಾಗಿ ಬೆಳೆಯಬೇಕಾದರೆ ನಿಷ್ಠಾವಂತ ಕಾರ್ಯಕರ್ತರಿಂದಲೇ ಅದು ಸಾಧ್ಯ ಎಂಬ ಸತ್ಯವನ್ನು ಭಾಷ್ಯಂ ಮನಗಂಡಿದ್ದರೆಂಬುದು ಇದರಿಂದ ರುಜುವಾತಾಗುತ್ತದೆ.

ನಮ್ಮ ಪಾಲಿಗೆ ಬೆಂಗಳೂರಿನ ಕಾಂಗ್ರೆಸ್ ಆಫೀಸ್ ಯಾವಾಗಲೂ ಒಂದು ದೇವಸ್ಥಾನದಂತೆ ಅನಿಸುತ್ತಿತ್ತು. ಕಾಂಗ್ರೆಸ್ ಆಫೀಸಿನಲ್ಲಿ ಎರಡು ಮೂರು ಕುರ್ಚಿಗಳು ಹಾಗೂ ಒಂದು ಮೇಜಿನ ಹೊರತಾಗಿ ಮತ್ತೇನೂ ವಿಶೇಷ ಪೀಠೋಪಕರಣಗಳಿರಲಿಲ್ಲ. ಅನೇಕ ಬಾರಿ ಕೆ. ಸಿ. ರೆಡ್ಡಿಯವರು ಮಾಧವ ರಾಯರು, ಭಾಷ್ಯಂ, ಸುಬ್ರಮಣ್ಯಂ ಮೊದಲಾದವರು ಹೋಟೆಲ್‌ನಿಂದ ಟಿಫಿನ್ ಕ್ಯಾರಿಯರ್‌ನಲ್ಲಿ ಊಟ ತರಿಸಿ ಚಾಪೆಯ ಮೇಲೆ ಕುಳಿತು ಊಟ ಮಾಡುತ್ತಿದ್ದರು.

ಭಾಷ್ಯಂ ಅವರದು ಅದ್ಭುತವಾದ ವಾಕ್‌ಪಟುತ್ವ. ಇಂಗ್ಲೀಷ್ ಹಾಗೂ ಕನ್ನಡ ಭಾಷೆಗಳ ಮೇಲೆ ಅವರ ಪ್ರಭುತ್ವ ಅಸಾಧಾರಣವಾಗಿತ್ತು. ಎಲ್ಲ ವರ್ಕಿಂಗ್ ಕಮಿಟಿ ಸಭೆಗಳಲ್ಲಿಯೂ ಅವರು ಇರಲೇ ಬೇಕು. ನಿರ್ಣಯಗಳನ್ನೆಲ್ಲ ಬರೆಯುವವರೂ ಅವರೇ. ಉಳಿದೆಲ್ಲ ಸದಸ್ಯರೂ ಘಂಟೆಗಟ್ಟಲೆ ಚರ್ಚಿಸಿದ ಮೇಲೆ ನಿರ್ಣಯವನ್ನು ಭಾಷ್ಯಂ ಕಡೆಗೆ ಬಿಡುವರು. ಭಾಷ್ಯಂ ಮೂರು ನಾಲ್ಕು ನಿಮಿಷಗಳಲ್ಲಿ ನಿರ್ಣಾಯಕ ಅಂಶಗಳನ್ನು ಸಭೆಗೆ ಹೇಳಿದರೆ ಅದೇ 'resolution' ಆಗಿಬಿಡುತ್ತಿತ್ತು. ಅಂತಹ ಮಹಾ ಬುದ್ಧಿವಂತ.

ಭಾಷ್ಯಂ ಕಾಂಗ್ರೆಸ್ ಕಾರ್ಯಕರ್ತರನ್ನು ಎಷ್ಟು ಆಳವಾಗಿ ಪ್ರೀತಿಸುತ್ತಿದ್ದರೆಂಬುದಕ್ಕೆ ಇನ್ನೊಂದು ಉದಾಹರಣೆ ಕೊಡುತ್ತೇನೆ. ಜೈಲಿನಲ್ಲಿ ನಾವೆಲ್ಲ ಇದ್ದಾಗ ಭಾಷ್ಯಂ ಹೊರಗಿದ್ದರು. ಸೆರೆಮನೆಯಲ್ಲಿದ್ದ ಕಾಂಗ್ರೆಸ್ಸಿನ ಕಾರ್ಯಕರ್ತರೆಲ್ಲರನ್ನೂ ಆ ಸಮಯದಲ್ಲಿ ನೀರಿನ ನಾಲಾ ಸಿದ್ಧಮಾಡಲು ಕರೆದುಕೊಂಡು ಹೋಗುತ್ತಿದ್ದರು. ಜೈಲಿನಿಂದ ಹೊರಗೆ ಇದ್ದ ಭಾಷ್ಯಂ ಅವರಿಗೆ ಎಲ್ಲ ಕಾರ್ಯಕರ್ತರೂ ಬರಿಗಾಲಿನಲ್ಲಿಯೇ ಉರಿಬಿಸಿಲಿನಲ್ಲಿ ಕೆಲಸಮಾಡುತ್ತಿದ್ದರೆಂಬ ಸಂಕಟ. ಅದಕ್ಕಾಗಿ ಭಾಷ್ಯಂ ಒಂದು ನೂರು ಜೊತೆ ಚಪ್ಪಲಿ ಖರೀದಿಸಿ ಜೈಲಿಗೆ ಅವನ್ನು ತೆಗೆದುಕೊಂಡು ಹೋದರು. ಆದರೆ strict ಆಗಿದ್ದ ಸುಪರಿಂಟೆಂಡೆಂಟ್ ಭಾಷ್ಯಂ ಅವರನ್ನು ಚಪ್ಪಲಿ ಕೊಡಲು ನಿರಾಕರಿಸಿದ. ದುಃಖಿತಪ್ತ ಭಾಷ್ಯಂ ಆ ಎಲ್ಲ ಚಪ್ಪಲಿ ಜೋಡಿಗಳನ್ನು ಅಲ್ಲೇ ಹತ್ತಿರದ ಅಂಗಡಿಯೊಂದಕ್ಕೆ ಕೊಟ್ಟು ಬೆಂಗಳೂರಿಗೆ ಮರಳಿದರು. ಅಂಗಡಿಯವನು ನಾವೆಲ್ಲ ಮುಂಜಾನೆ ಊಟಮಾಡಿ ಕೆಲಸಕ್ಕೆಂದು ಪೋಲೀಸ್ ಬಂದೋಬಸ್ತಿನಲ್ಲಿ ಹೊರಡುವಾಗ ಏನೂ ತಿಳಿಯದವನಂತೆ ಒಂದೊಂದೆ ಚಪ್ಪಲಿ ಜೊತೆಗಳನ್ನು ರಸ್ತೆಯ ಮೇಲೆ ಎಸೆಯುತ್ತಿದ್ದನು ಹಾಗೂ ನಮ್ಮಲ್ಲಿ ಕೆಲವರು ಸುಮ್ಮನೇ ಅವನ್ನು ಎತ್ತಿಕೊಂಡು ಧರಿಸಿಕೊಳ್ಳುತ್ತಿದ್ದರು. ನಾವು ಸೆರೆಮನೆವಾಸ ಮುಗಿಸಿ ಕಾಂಗ್ರೆಸ್ ಕಚೇರಿಗೆ ಬಂದಾಗಲೇ ನಮಗೆ ಅವು ಭಾಷ್ಯಂ ಅವರ ಪ್ರೀತಿಯ ಕೊಡುಗೆಗಳೆಂದು ಗೊತ್ತಾಗಿದ್ದು. ಈ ಘಟನೆ ಭಾಷ್ಯಂ ಅವರ ಹೃದಯ ಶ್ರೀಮಂತಿಕೆಯನ್ನೂ, ಅವರು ಕಾಂಗ್ರೆಸ್ ಕಾರ್ಯಕರ್ತರನ್ನು ಪ್ರೀತಿಸುವ ರೀತಿಯನ್ನೂ ತೋರಿಸುತ್ತದೆ.

ನಾನು ೧೯೩೯ರ ಅಕ್ಟೋಬರ್ ಎರಡರಂದು ಮತ್ತೊಮ್ಮೆ ಜೈಲಿಗೆ ಹೋದೆ. ನಾನು ಜೈಲಿನಲ್ಲಿದ್ದಾಗಲೇ ೧೯೪೦ರಲ್ಲಿ ಶಿವಮೊಗ್ಗದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಭಾಷ್ಯಂ ಅವರೇ ಅಧಿವೇಶನದ ಅಧ್ಯಕ್ಷರು. ಭಾಷ್ಯಂ ಆಗ ಮಾಡಿದ ಅಧ್ಯಕ್ಷ ಭಾಷಣ ಜನರಲ್ಲಿ ಪ್ರಚಂಡ ಉತ್ಸಾಹವನ್ನು ಮೂಡಿಸಿತು. ನಾವೆಲ್ಲರೂ ಜೈಲಿನೊಳಗಿದ್ದೇ ಈ ಕಾರ್ಯಕ್ರಮದ ವ್ಯವಸ್ಥೆಯನ್ನೂ ಭಾಷ್ಯಂ ಅವರ ಭಾಷಣವನ್ನೂ ತಿಳಿದು ಸಂತೋಷ ಪಟ್ಟೆವು. ಭಾಷ್ಯಂ ಅವರಿಗೆ ಶಿವಮೊಗ್ಗ ಜನತೆಯ ಕುರಿತು ಯಾವಾಗಲೂ ಬಹಳ ಅಭಿಮಾನ.

ಇನ್ನೊಂದು ಘಟನೆಯನ್ನು ನಾನು ಪ್ರಸ್ತಾಪಿಸಲೇ ಬೇಕು. ೧೯೪೭ರಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾದ ನಂತರ ಮಂತ್ರಿಗಳಲ್ಲಿ ಅನೇಕರು ಸಾಗರದಲ್ಲಿ ಕಾಂಗ್ರೆಸ್ ಅಧಿವೇಶನಕ್ಕೆ ಬಂದಿದ್ದರು. ಬಂದವರಲ್ಲಿ ಕಾರ್ಮಿಕ ಮಂತ್ರಿಯಾಗಿದ್ದ ಭಾಷ್ಯಂ ಕೂಡ ಒಬ್ಬರು. ೧೯೪೨ರ ಸತ್ಯಾಗ್ರಹದಲ್ಲಿ ಶಿವಮೊಗ್ಗ-ಭದ್ರಾವತಿಯ ಅನೇಕ ಜನ ಕಾರ್ಮಿಕ ಮುಖಂಡರುಗಳು ಕೆಲಸ ಕಳೆದುಕೊಂಡಿದ್ದರು ಅಥವಾ ಗಡಿ ಪಾರಾಗಿದ್ದರು. ಜವಾಬ್ದಾರಿ ಸರ್ಕಾರ ಸ್ಥಾಪಿತವಾದ ಕೂಡಲೇ ಗಡಿಪಾರಾದವರನ್ನು ತಿರುಗಿ ಭದ್ರಾವತಿಗೆ ಕರೆಸಿಕೊಳ್ಳುವುದೂ, ಸತ್ಯಾಗ್ರಹದ ಕಾರಣದಿಂದ ಕೆಲಸದಿಂದ ವಜಾ ಆದ ಕಾರ್ಮಿಕರಿಗೆ ಪುನಃ ಕೆಲಸ ನೀಡುವುದೂ ಸರ್ಕಾರದ ಆದ್ಯ ಕರ್ತವ್ಯವಾಗಿತ್ತು. ಆದರೆ ಸ್ಥಾಪನೆಗೊಂಡು ನಾಲ್ಕಾರು ತಿಂಗಳುಗಳಾಗಿದ್ದರೂ ಸರ್ಕಾರ ಆ ಕೆಲಸ ಮಾಡಿರಲಿಲ್ಲ. ಇದರಿಂದ ಸಿಟ್ಟಿಗೊಂಡಿದ್ದ ಜನ ಸಾಗರದಲ್ಲಿ ಸರ್ಕಾರವನ್ನು ವಿರೋಧಿಸಿ resolution ಮಾಡುವಂತೆ ನನ್ನನ್ನು ಕೇಳಿದರು. ಅಂತೆಯೇ ನಾನು ಈ ಕಾರಣದಿಂದ we condemn the government ಎಂದು ಗೊತ್ತುವಳಿಯನ್ನು ಮಂಡಿಸಿದೆವು. ಇದಕ್ಕೆ ಉತ್ತರವಾಗಿ ಸಭೆಯಲ್ಲಿ ಮಾತಾಡಲು ನನ್ನನ್ನೇ ಆಮಂತ್ರಿಸಿದರು. ನಾನು ಆಗಿನ್ನೂ ಬಿಸಿರಕ್ತದ ತರುಣ. ಎದ್ದು

ನಿಂತು ಭಾಷ್ಯಂ ಅವರನ್ನೇ ಉದ್ದೇಶಿಸಿ ಹೀಗೆ ಹೇಳಿದೆ "ಸ್ವಾಮಿ ಭಾಷ್ಯಂರವರೆ, ನೀವು ಇಲ್ಲಿಗೆ ಬಂದು ಕಾರ್ಮಿಕರನ್ನು ಸತ್ಯಾಗ್ರಹಕ್ಕೆ ಪ್ರೇರೇಪಿಸಿದಿರಿ. ನಿಮ್ಮ ಮಾತಿನಂತೆ ಚಳವಳಿಯಲ್ಲಿ ಧುಮುಕಿದ ಅನೇಕರು ಆ ಕಾರಣದಿಂದ ತಮ್ಮ ನೌಕರಿಗಳನ್ನು ಕಳೆದುಕೊಂಡಿದ್ದಾರೆ. ಇನ್ನೂ ಹಲವರು ಶಿವಮೊಗ್ಗ-ಭದ್ರಾವತಿ ಪ್ರದೇಶಗಳಿಂದ ಗಡಿಪಾರು ಆಗಿದ್ದಾರೆ. ನೀವೇನೋ ಸ್ವಾತಂತ್ರ್ಯ ಬಂದ ನಂತರ ಮಂತ್ರಿಗಳಾಗಿದ್ದೀರಿ ನಿಜ. ಆದರೆ ಈ ಬಡಪಾಯಿಗಳ ಗತಿ ಏನು?"

ಇದನ್ನು ಸ್ವತಃ ತಾವೇ ಉತ್ತರಿಸಿದ ಕಾರ್ಮಿಕ ಮಂತ್ರಿ ಭಾಷ್ಯಂ ಅವರು ಈ ಅಗತ್ಯದ ಕೆಲಸ ತಕ್ಷಣವೇ ಆಗಬೇಕಿತ್ತೆಂದೂ, ಆದರೆ ಕೆಲವು ಕಾನೂನಿನ ತೊಡಕುಗಳಿಂದ ತಡವಾಯಿತೆಂದೂ ತಿಳಿಸಿದರು. ಈ ತಡವಾಗಿದ್ದಕ್ಕೆ ಅವರು ಕ್ಷಮೆಯನ್ನೂ ಕೋರಿದರು. ಅಷ್ಟೇ ಅಲ್ಲ ಬೆಂಗಳೂರಿಗೆ ಹಿಂದಿರುಗಿದವರು ಈ ನಿಟ್ಟಿನಲ್ಲಿ ತಕ್ಷಣವೇ ಕಾರ್ಯಪ್ರವೃತ್ತರಾಗಿ ಗಡಿಪಾರು ಹೊಂದಿದ ಕಾರ್ಮಿಕ ಮುಖಂಡರನ್ನು ತಿರುಗಿ ಭದ್ರಾವತಿಗೂ ಹಾಗೂ ಸೇವೆಯಿಂದ ವಜಾ ಮಾಡಲ್ಪಟ್ಟ ನೌಕರರನ್ನು ತಿರುಗಿ ಸೇವೆಗೆ ಬರುವಂತೆಯೂ ಆದೇಶ ಹೊರಡಿಸಿದರು. ಈ ಘಟನೆ ಭಾಷ್ಯಂರವರ ಕರ್ತವ್ಯ ನಿಷ್ಠೆ ಹಾಗೂ ದೊಡ್ಡ ಮನಸ್ಸಿನ ಇನ್ನೊಂದು ಉದಾಹರಣೆ.

ಭಾಷ್ಯಂ ಅವರ ಸರಳ ವ್ಯಕ್ತಿತ್ವ ಎಲ್ಲರನ್ನೂ ಆಕರ್ಷಿಸುತ್ತಿತ್ತು. ಮಂತ್ರಿಗಳಾದಾಗಾಗಲೀ, ವಿಧಾನ ಪರಿಷತ್ತಿನ ಅಧ್ಯಕ್ಷರಾಗಿರುವಾಗಲೀ ಅವರು ತಾವು ದೊಡ್ಡ ಮನುಷ್ಯರೆಂದು ತುಸುಕೂಡ ಬೀಗಿರಲಿಲ್ಲ. ನಾನು ಅಥವಾ ಉಳಿದ ಕಾಂಗ್ರೆಸ್ ಕಾರ್ಯಕರ್ತರು ಯಾರೇ ಆಗಲಿ ಎಲ್ಲೇ ಆಗಲಿ ಸಿಕ್ಕಿದಾಗ ನಿಂತು ಮಾತಾಡಿಸುವವರು; ಸೌಖ್ಯವನ್ನು ವಿಚಾರಿಸುವವರು. ಇಂಥ ಸಹೃದಯಿ ವ್ಯಕ್ತಿ ರಾಜಕೀಯ ರಂಗದಲ್ಲಷ್ಟೇ ಅಲ್ಲ ಸಮಾಜದಲ್ಲಿಯೇ ಕಾಣಸಿಗುವುದು ಅತ್ಯಂತ ವಿರಳ. ಭಾಷ್ಯಂ ನಮ್ಮ ರಾಜ್ಯಕ್ಕೆ, ನಮ್ಮ ಜನತೆಗೆ ಕೊಟ್ಟ ಕೊಡುಗೆ ಅಪಾರ. ನಾವು ಅವರನ್ನು ಎಂದಿಗೂ ಮರೆಯುವಂತಿಲ್ಲ."

೬. **ಶ್ರೀ ಕೆ. ಟಿ. ರಾಮಸ್ವಾಮಿ, ಬೆಂಗಳೂರು** (ಶ್ರೀ ರಾಮಸ್ವಾಮಿಯವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಇತಿಹಾಸ ವಿಭಾಗದಲ್ಲಿ ಅಧ್ಯಾಪಕರು. ಕೆ. ಟಿ. ಭಾಷ್ಯಂ ಕುರಿತಾದ ಅವರ ಅಭಿಪ್ರಾಯಗಳನ್ನು ಡಾ. ಸೂರ್ಯನಾಥ ಕಾಮತ್ ಅವರು ಸಂಪಾದಿಸಿದ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' (ದ್ವಿತೀಯ ಸಂಪುಟ) ಈ ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ.):-

"ದೇಶಭಕ್ತ, ರಾಷ್ಟ್ರೀಯ ನಾಯಕ, ದಕ್ಷ ಆಡಳಿತಗಾರ, ಉತ್ತಮ ವಾಗ್ಮಿ, ಕಾರ್ಮಿಕ ಮುಖಂಡ ಹಾಗೂ ಮೈಸೂರು ಕಾಂಗ್ರೆಸ್ಸಿನ ಸ್ಥಾಪಕರಲ್ಲೊಬ್ಬರಾದ ಕೆ. ತುಪ್ಪಲ್ ನರಸಿಂಹ ಅಯ್ಯಂಗಾರ್ ಭಾಷ್ಯಂ.

೧೯೨೧ ರಿಂದಲೆ ಸತ್ಯಾಗ್ರಹ ಚಳವಳಿಯಲ್ಲಿ ಭಾಗವಹಿಸಿದರು. ೧೯೨೬ರಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಚುನಾಯಿತರಾದರು. ೧೯೩೯ ರವರೆಗೆ ಆ ಸಭೆಯ ಪ್ರಮುಖ ಸದಸ್ಯರಾಗಿದ್ದರು. ೧೯೨೮ರಲ್ಲಿ 'ಹಿಂದು ಕಾನೂನಿನಲ್ಲಿ ಮಹಿಳೆಯರು' ಗ್ರಂಥ ಬರೆದರು. ಭಾಷ್ಯಂ ವಿಚಾರಗಳಿಂದ ಪ್ರಭಾವಿತವಾಗಿ ಅದೇ ವರ್ಷ ಸರ್ಕಾರವು ಭಾರತೀಯ ಮಹಿಳೆಯರ ಹಕ್ಕು ಭಾಧ್ಯತೆಗಳನ್ನು ಪರಿಶೀಲಿಸಲು ಒಂದು ಸಮಿತಿಯನ್ನು ನೇಮಿಸಿತು.

ಮೈಸೂರು ಕಾಂಗ್ರೆಸ್ಸಿನ ಇತಿಹಾಸದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ನಡೆಸಿದ ಚಳವಳಿ ಒಂದು ಮುಖ್ಯ ಘಟ್ಟ. ಆ ಚಳವಳಿಯಲ್ಲಿ ಭಾಷ್ಯಂರವರ ಪಾತ್ರ ಹಿರಿಯದು. ಚಳವಳಿ ಯಶಸ್ವಿಯಾಗಿ ೧೯೪೭ರಲ್ಲಿ ಮೈಸೂರು ಸಂಸ್ಥಾನವು ಜವಾಬ್ದಾರಿ ಸರ್ಕಾರ ಸ್ಥಾಪಿತವಾದಾಗ ಕೆ. ಸಿ. ರೆಡ್ಡಿಯವರ ನಾಯಕತ್ವದ ಪ್ರಥಮ ಜನಪ್ರಿಯ ಮಂತ್ರಿ ಮಂಡಳವದಲ್ಲಿ ಭಾಷ್ಯಂ ಕಾನೂನು ಮತ್ತು ಕಾರ್ಮಿಕ ಖಾತೆಗಳನ್ನು ನಿರ್ವಹಿಸಿದರು. ಐದು ವರ್ಷಗಳ ಕಾಲ (೧೯೪೭-೫೨) ಜನಪ್ರಿಯ ಮಂತ್ರಿಗಳಾಗಿದ್ದರು. ೧೯೫೨ರಲ್ಲಿ ಮೈಸೂರು ವಿಧಾನ ಪರಿಷತ್ತಿನ ಅಧ್ಯಕ್ಷರಾಗಿ ಅವಿರೋಧವಾಗಿ ಚುನಾಯಿತರಾದರು. ಅವರ ದಿಟ್ಟತನದ ರೂಲಿಂಗ್‌ಗಳು ಇಂದಿಗೂ ಮಾದರಿಯಾಗಿವೆ.”

೭. **ಶ್ರೀ ಎ. ರಾಮಣ್ಣ, ಸ್ವಾತಂತ್ರ್ಯ ಹೋರಾಟಗಾರರು. ಮೈಸೂರು.** (ಶ್ರೀ ರಾಮಣ್ಣನವರು ಕೆ. ಟಿ. ಭಾಷ್ಯಂ ಅವರಿಗಿಂತ ವಯಸ್ಸಿನಲ್ಲಿ ಸಾಕಷ್ಟು ಚಿಕ್ಕವರಾದರೂ ಭಾಷ್ಯಂ ಅವರೊಂದಿಗೆ ಕೆಲಸಮಾಡಿದ ಸ್ವಾತಂತ್ರ್ಯ ಯೋಧರು. ಕರ್ನಾಟಕದಲ್ಲಿ ಜವಾಬ್ದಾರಿ ಸರ್ಕಾರ ಬರುವಲ್ಲಿ ದುಡಿದ ಪ್ರಮುಖರಲ್ಲಿ ರಾಮಣ್ಣನವರು ಒಬ್ಬರು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸಾರ್ವಜನಿಕ ಕ್ಷೇತ್ರದಲ್ಲಿ ದುಡಿದ ರಾಮಣ್ಣನವರು ಕಳೆದ ೫೦ ವರ್ಷಗಳಿಂದಲೂ ಪತ್ರಿಕಾರಂಗದಲ್ಲಿ ಗಣನೀಯ ಕಾರ್ಯಮಾಡುತ್ತಿದ್ದಾರೆ. ಅವರ ಮಾಸಿಕ ಪತ್ರಿಕೆ 'ವಿಜಯ' ಈಗ ಐವತ್ತು ಸಂವತ್ಸರಗಳನ್ನು ಮುಗಿಸಿ ಐವತ್ತೊಂದರಲ್ಲಿ ಅಡಿಯಿಟ್ಟಿದೆ.):-

“ನಾನು ಶ್ರೀ ಭಾಷ್ಯಂ ಅಯ್ಯಂಗಾರ್‌ರನ್ನು ಮೊದಲಬಾರಿಗೆ ಭೇಟಿಯಾಗಿದ್ದು ೧೯೩೭ರ ಆಗಸ್ಟ್ ೧೬ರಂದು. ಮೈಸೂರಿನ ಛತ್ರವೊಂದರಲ್ಲಿ ಕಾಂಗ್ರೆಸ್ ಪಕ್ಷ ಮತ್ತು ಪ್ರಜಾಸಂಯುಕ್ತ ಪಾರ್ಟಿಯ ಸಭೆಯಲ್ಲಿ ಅವರನ್ನು ನೋಡಿದೆ. ಇದೊಂದು ಮಹತ್ವದ ಸಭೆಯಾಗಿದ್ದು ರಾಜ್ಯದಲ್ಲಿ ಈ ಎರಡೂ ಸಂಸ್ಥೆಗಳನ್ನು ಒಂದು ಗೂಡಿಸಲು ಗಣ್ಯರೆಲ್ಲರೂ ಅಲ್ಲಿ ಸೇರಿದ್ದರು. ಶ್ರೀ ಕೆ. ಟಿ. ಭಾಷ್ಯಂ ಅವರೇ ಅಲ್ಲಿನ ನಾಯಕರು. ಅತ್ಯಂತ ಪ್ರಭಾವಶಾಲಿ ವ್ಯಕ್ತಿತ್ವ ಅವರದೆಂದು ನಾನು ಅವರನ್ನು ಮೊದಲ ಬಾರಿ ನೋಡಿದಾಗಲೇ ಅಂದುಕೊಂಡೆ.

೧೯೪೨-೪೩ರಲ್ಲಿ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ನಾವಿಬ್ಬರೂ ಒಟ್ಟಾಗಿ ಸೆರೆಯಲ್ಲಿದ್ದೆವು. ಆಗ ನನಗೆ ಭಾಷ್ಯಂ ಅವರ ಇನ್ನೂ ಹತ್ತಿರದ ಪರಿಚಯವಾಯಿತು. ಜೊತೆಗೆ ಅವರ ಬಹುಮುಖ ವ್ಯಕ್ತಿತ್ವದ ವೈವಿಧ್ಯಮಯ ಆಯಾಮಗಳ ಪರಿಚಯವೂ ಆಯಿತು. ನಾವೆಲ್ಲರೂ ಸೇರಿ ಅಡಿಗೆ ಮಾಡುತ್ತಿದ್ದೆವು ಎಂಬುದನ್ನು ನೆನಪಿಸಿಕೊಂಡಾಗ ಈಗಲೂ ತಮಾಷೆ ಎನಿಸುತ್ತದೆ. ನಮಗೆಲ್ಲರಿಗೂ ಅಡಿಗೆ ಗೊತ್ತಿದ್ದರೂ ಪೈಪೋಟಿಯಲ್ಲಿ ಭಾಷ್ಯಂ ಅವರ ಅಡಿಗೆಯದೇ ಮೇಲುಗೈ. ಇವರು ಕಿರಿಯರಿಗೆ ಎಲ್ಲ ವಿಷಯಗಳಲ್ಲಿಯೂ ಮಾರ್ಗದರ್ಶಿ, ಕಾರ್ಮಿಕ ನಾಯಕ. ಯಾವುದೇ ಸಂಘಟನೆಯನ್ನು ಕಟ್ಟಿ ಬೆಳೆಸುವ ಕುರಿತು ಭಾಷ್ಯಂ ನಮಗೆಲ್ಲರಿಗೂ ತಿಳಿ ಹೇಳುತ್ತಿದ್ದರು. ಅವರ ಕಾರ್ಯಚಟುವಟಿಕೆಗಳೇ ಈ ಕುರಿತು ಕೂಲಂಕುಷ ಪಾಠ ಹೇಳುವಂತೆ ಇರುತ್ತಿದ್ದವು. ಆಧ್ಯಾತ್ಮ ಮತ್ತು ರಾಜಕೀಯ ಇವೆರಡರ ಅದ್ಭುತ ಸಂಗಮವಾಗಿದ್ದರು. ಧಾರ್ಮಿಕ ಕ್ಷೇತ್ರವು ಭಾಷ್ಯಂ ಅವರ ಅತ್ಯಂತ ಪ್ರಿಯವಾದ ಕ್ಷೇತ್ರವಾಗಿದ್ದರೂ ಜನರ, ಅದರಲ್ಲೂ ವಿಶೇಷವಾಗಿ ಕಾರ್ಮಿಕರ, ಹಿತಾಸಕ್ತಿಗಳಿಗಾಗಿ ಅವರು ತಮ್ಮ ಉಳಿದೆಲ್ಲ ಅಭಿರುಚಿಗಳನ್ನು ಬದಿಗಿಡುತ್ತಿದ್ದರು. ಕರ್ನಾಟಕದ ಕಾರ್ಮಿಕ ಜಗತ್ತು ಭಾಷ್ಯಂ ಅವರನ್ನು ಸದಾ ನೆನಪಿಡುತ್ತದೆ.

ಭಾಷ್ಯಂ ಅಯ್ಯಂಗಾರ್ ಅಂದಿನ ಕಾಲದ ಅತ್ಯಂತ ಪ್ರಭಾವಶಾಲಿ ವ್ಯಕ್ತಿ. ಸದಾ ಚಟುವಟಿಕೆಯಿಂದ ಕೂಡಿದ ಬುದ್ಧಿವಂತ ವ್ಯಕ್ತಿತ್ವ ಉಳ್ಳವರು. ಆಚಾರ ವಿಚಾರಗಳಲ್ಲಿ ಶುಚಿತ್ವ ಇವರ ಲಕ್ಷಣವಾಗಿತ್ತು. ಮೈಸೂರಿನ ಕಾಂಗ್ರೆಸ್ಸಿನ ಇತಿಹಾಸದಲ್ಲಿ ಭಾಷ್ಯಂ ಅವರ ಸಂಘಟನಾತ್ಮಕ ಕೊಡುಗೆಯು ದೊಡ್ಡದು. ಉದಾಹರಣೆಗೆ ಮೈಸೂರಿನ ಅಂದಿನ ದಿವಾನರು ಹಾಗೂ ಕಾಂಗ್ರೆಸ್ ಸಂಸ್ಥೆಯ ನಡುವೆ ಭಿನ್ನಾಭಿಪ್ರಾಯಗಳು ಮೂಡಿದ ಸಂದರ್ಭದಲ್ಲಿ ಅನೇಕ ಬಾರಿ ಭಾಷ್ಯಂ ಅವರ ಚಾಕಚಕ್ಯತೆಯಿಂದ ದುರ್ಘಟನೆಗಳು ಜರುಗುವುದು ತಪ್ಪಿದವು. ಯಾರಿಗೂ ತಗ್ಗಿ ಬಗ್ಗಿ ನಡೆಯದ ಖಡಾಖಂಡಿತವಾದಿ. ಹಾಗೆಂದು ಉಳಿದವರ ನೋವಿಗೆ ಸ್ಪಂದಿಸುವ ಮಾನವತಾವಾದಿ ಕೂಡ. ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಮತ್ತು ಕೆಲಸದಲ್ಲಿ ನಿಷ್ಠೆ ಭಾಷ್ಯಂ ಅವರ ಹೆಗ್ಗುರುತು. ಪಾದರಸದಂತ ಚುರುಕುತನ ಹಾಗೂ ಸಮಯ ಪ್ರಜ್ಞೆ ಇವರ ಗುಣಲಕ್ಷಣ, ಯಾವ ಕೆಲಸವನ್ನೂ pending ಎಂದು ಮುಂದೆ ಹಾಕುವವರಲ್ಲ. ಕಾಂಗ್ರೆಸ್ ವರ್ತುಳದಲ್ಲಿ ಭಾಷ್ಯಂ ಮಾತಿಗೆ ಬಹುಬೆಲೆ. ಉದಾಹರಣೆಗೆ ಕಾಂಗ್ರೆಸ್ ಕೆಲಸಗಾರರಿಗೆ ಅನಾರೋಗ್ಯದ ಸಮಸ್ಯೆಯಿದ್ದಾಗ ಔಷಧಿಕೊಡುವ ಡಾಕ್ಟರರಿಗೆ ಫೋನ್ ನೀಡಬೇಕೆಂದು ನಿರ್ಣಯಿಸಿ ಕೂಡಲೇ ಫೋನ್ ಸಂಪರ್ಕಕ್ಕೆ ಅನುಕೂಲಮಾಡಿಕೊಟ್ಟರು. ಇಂದು ಈ ಕಾರ್ಯ ಚಿಕ್ಕದೆನಿಸಬಹುದಾದರೂ ಫೋನುಗಳೇ ಅತಿ ದುರ್ಬಲವಾಗಿದ್ದ ಅಂದಿನ ದಿನಗಳಲ್ಲಿ ಭಾಷ್ಯಂ ಮಾಡಿದ ಈ ಕೆಲಸ ಅವರ ವರ್ಚಸ್ಸನ್ನು ಎತ್ತಿತೋರಿಸುತ್ತದೆ.

ಭಾಷ್ಯಂ ಉತ್ತಮ ಮಾತುಗಾರ. ಮಾತಿನಲ್ಲಿ ತಾರ್ಕಿಕತೆ ಹಾಗೂ ಉಳಿದವರನ್ನು ಒಪ್ಪಿಸುವ ರೀತಿ ಅಸಾಧಾರಣವಾಗಿತ್ತು. ಯಾವುದೇ ಸಮಸ್ಯೆಯಿರಲಿ, ಆ ಸಮಸ್ಯೆಯನ್ನು ವಿಶ್ಲೇಷಿಸಿ ಎತ್ತಿ ಹಿಡಿಯುವ ರೀತಿ, ಪ್ರಶ್ನಿಸುವ ಪದ್ಧತಿ, ಪ್ರಶ್ನೆಗಳಿಗೆ ಉತ್ತರಿಸುವ ರೀತಿ ಇವೆಲ್ಲವೂ ಅನುಕರಣೀಯ. ಮೈಸೂರು ಪಾರ್ಲಿಮೆಂಟಿನ ಸದಸ್ಯರೆಲ್ಲರೂ ಒಕ್ಕೊರಲಿನಿಂದ ಇದನ್ನು ಪ್ರಶಂಸಿಸುತ್ತಿದ್ದರು.

ಅಖಿಲ ಭಾರತ ಕಾಂಗ್ರೆಸ್ ಪಕ್ಷದಂತೆ ಮೈಸೂರು ಕಾಂಗ್ರೆಸ್ಸಿನಲ್ಲಿಯೂ ಬೇರೆ ಬೇರೆ ಸಮಿತಿಗಳಿದ್ದವು. ಮೈಸೂರು ಕಾಂಗ್ರೆಸ್ಸಿನ ಕೆಲವು ಮುಖಂಡರು ಭಾಷ್ಯಂ ಅವರ ಜೊತೆ ಭಿನ್ನಾಭಿಪ್ರಾಯ ಹೊಂದಿದ್ದ ಕಾರಣದಿಂದ ಭಾಷ್ಯಂ ಅವರನ್ನು ಸಮಿತಿಯಿಂದ ತೆಗೆದುಹಾಕಿದರು. ಆಗ ನಾವುಗಳು, ಯುವಕರು ರಾಜ್ಯದ ಹಲವೆಡೆ ಪ್ರವಾಸಮಾಡಿ ಎ.ಎಂ.ಸಿ.ಸಿ. ಸಮಿತಿಯು ಭಾಷ್ಯಂ ಅವರನ್ನು ಸಮಿತಿಯಿಂದ ಏಕಾಏಕಿ ಹೊರಹಾಕಿರುವುದು ತಪ್ಪು; ಈ ಕುರಿತು ವಿಶೇಷ ಸಭೆ ಕರೆಯಬೇಕು ಎಂದು ಒತ್ತಾಯಿಸಿದೆವು. ಹೊಳೆನರಸಿಪುರದ ನದಿಯ ದಡದಲ್ಲಿದ್ದ ಛತ್ರದಲ್ಲಿ ನಡೆದ ಮಹತ್ವದ ಸಭೆಯಲ್ಲಿ ಈ ಕುರಿತು ಗಂಭೀರ ಚರ್ಚೆ ನಡೆದು ಭಾಷ್ಯಂ ಅವರನ್ನು ಹೊರಹಾಕುವ ನಿರ್ಣಯ ರದ್ದಾಗಿ ಅವರನ್ನು ತಿರುಗಿ ತೆಗೆದುಕೊಂಡದ್ದು ಮೈಸೂರು ಕಾಂಗ್ರೆಸ್ ಇತಿಹಾಸದಲ್ಲಿಯೇ ಪ್ರಮುಖವಾದದ್ದು. ಈ ಸಂದರ್ಭದಲ್ಲಿ working committee ಯ ಕಾಂಗ್ರೆಸ್ ಮುಖಂಡರೆಲ್ಲರೂ ತೋರಿಸಿದ ಒಗ್ಗಟ್ಟು ಶ್ಲಾಘನೀಯ. ಇಂದು ಇಂಥ ಒಗ್ಗಟ್ಟು, ಧೈರ್ಯ ಉಂಟಾಗಲು ಸಾಧ್ಯವಿಲ್ಲ. ಆಗಿನ ಪಕ್ಷದ ಚಟುವಟಿಕೆಗಳು ಪ್ರಜಾಪ್ರಭುತ್ವ ತತ್ವಗಳನ್ನು ಆಧರಿಸಿದ್ದವು. ಆಗಿನ ಚರ್ಚೆ ಮಹತ್ವದ್ದಾಗಿರುತ್ತಿತ್ತು. ಆಡಿದ ಮಾತುಗಳಲ್ಲಿ ನಂಬಿಕೆಯಿರುತ್ತಿತ್ತು. ಇದು ಭಾಷ್ಯಂ ಶೈಲಿಯ ರಾಜಕಾರಣ.''

**೮. ಶ್ರೀ ಪಿ.ಎನ್. ಜವರಪ್ಪಗೌಡ, ಸ್ವಾತಂತ್ರ್ಯ ಹೋರಾಟಗಾರರು, ಮಂಡ್ಯ** (ಶ್ರೀ ಜವರಪ್ಪಗೌಡ ಅವರು ಮೈಸೂರು ಕಾಂಗ್ರೆಸ್ಸಿನ ಸಕ್ರಿಯ ಕಾರ್ಯಕರ್ತರಲ್ಲಿ ಒಬ್ಬರು. ಜವಾಬ್ದಾರಿ ಸರ್ಕಾರ ರಚನೆಗೆಂದು ನಡೆದ ಚಳವಳಿಯ ಸಂದರ್ಭದಲ್ಲಿ ಇವರು ಮಹತ್ವದ ಪಾತ್ರ ನಿರ್ವಹಿಸಿದ್ದರು. ಇವರು ಬರೆದ 'ಶಿವಪುರ ಧ್ವಜ ಸತ್ಯಾಗ್ರಹ' ಪುಸ್ತಕವು ಶಿವಪುರ ರಾಷ್ಟ್ರಕೂಟಕ್ಕೆ ಸಂಬಂಧಿಸಿದ ಒಂದು ಮಹತ್ವದ ದಾಖಲೆ.):-

"ನನ್ನ ಮತ್ತು ಭಾಷ್ಯಂ ಅವರ ಮೊದಲ ಭೇಟಿ ಬಹುಶಃ ೧೯೩೬-೩೭ರಲ್ಲಿ ಇರಬಹುದು. ನನಗೆ ಈಗ ನೆನಪಿಗೆ ಬರುವಂತೆ ಸ್ವಾತಂತ್ರ್ಯ ಯುದ್ಧದ ಆ ದಿನಗಳಲ್ಲಿ ಹಿರಿಯ ಮುಖಂಡರುಗಳನ್ನು ನಮ್ಮಂಥ ಕಿರಿಯ ಕಾಂಗ್ರೆಸ್ ಕಾರ್ಯಕರ್ತರು ಎಲ್ಲ ಸಾಮಾಜಿಕ ಕಾರ್ಯಗಳಲ್ಲಿಯೂ ಭೇಟಿಯಾಗಿ ಚರ್ಚಿಸುತ್ತಿದ್ದೆವು. ಮುಂಬಯಿಯಿಂದ ಶ್ರೀ ನಾರಿಮನ್ ಅವರು ಬೆಂಗಳೂರಿಗೆ ಬಂದಿದ್ದರು. ಅವರ ಭಾಷಣವನ್ನು ಚಿಕ್ಕಲಾಲ್‌ಬಾಗ್‌ನಲ್ಲಿ ಏರ್ಪಡಿಸಲಾಗಿತ್ತು. ಅವರ ಇಂಗ್ಲೀಷ್ ಭಾಷಣವನ್ನು ಪಾಲಹಳ್ಳಿ ಸೀತಾರಾಮಯ್ಯನವರು ಕನ್ನಡಕ್ಕೆ ಭಾಷಾಂತರಿಸುತ್ತಿದ್ದರು. ಪಾರ್ಕಿನಲ್ಲಿ ಭಾಷಣಮಾಡಲು ಪೋಲೀಸರು ನಿಷೇಧಾಜ್ಞೆ ಹೊರಡಿಸಿದ್ದರಿಂದ ನಾರಿಮನ್ ಅವರನ್ನು ಏಣಿ ಹಾಕಿ ಅಟ್ಟಣಿಗೆಯ ಮೇಲೆ ಕೂಡಿಸಲಾಗಿತ್ತು. ಪೌರವಾಣಿ ಪತ್ರಿಕೆಯನ್ನು ಆಗ ಬಿಡುಗಡೆಮಾಡಲಾಯಿತು. ನಂತರ ಪೊನ್ನಪ್ಪ ಪಾರ್ಕಿನಲ್ಲಿ ಭಾಷಣವಾಯಿತು ಹಾಗೂ ಲಾಠಿ ಚಾರ್ಜ ಆಯಿತು. ಈ ಸಂದರ್ಭದಲ್ಲಿ ನಾನು ಭಾಷ್ಯಂ ಅವರ ಜೊತೆ ಹತ್ತಿರದಿಂದ ಕೆಲಸಮಾಡಿದೆ. ೧೯೩೮ರಲ್ಲಿ ಪಂಡಿತ ಜವಾಹರ್‌ಲಾಲ್ ನೆಹರೂ ಅವರು ಬೆಂಗಳೂರಿಗೆ ಬಂದಿದ್ದರು. ರಾಮನಗರದಲ್ಲಿ ವಕೀಲರುಗಳು ಸೇರಿದ್ದು ಅಲ್ಲಿ ಭಾಷಣಮಾಡಿದರು. ಆಗಲೂ ನಾನು ಭಾಷ್ಯಂರವರ ಜೊತೆಗಿದ್ದೆ.

ಭಾಷ್ಯಂರವರ ಜೊತೆಗೆ ಶಿವಮೊಗ್ಗ ಜೈಲಿನಲ್ಲಿ ಇದ್ದೆ. ಅದೊಂದು ಅಪೂರ್ವ ಅನುಭವ ಆಗ ನನಗೆ ೨೦ ವರ್ಷ. ನನ್ನ ಮೇಲೆ ಒಂದೂವರೆ ವರ್ಷದ ಸಜಾ ಹಾಕಿದಾಗ ಭಾಷ್ಯಂರವರು 'ಈಗ ನೀನು ಕೆಳಗೆ ಮತ್ತು ಮೇಲೆ ಕಂಬಳಿ ಹೊದೆದು ಮಲಗು' ಎಂದು ಹಾಸ್ಯ ಮಾಡಿದ್ದರು.

ಭಾಷ್ಯಂ ಸೊಗಸಾಗಿ ಅಡಿಗೆ ಮಾಡುತ್ತಿದ್ದರು. ನಾವೆಲ್ಲರೂ ಬಾವಿಯಿಂದ ನೀರು ತರುತ್ತಿದ್ದೆವು ಹಾಗೂ ಉಳಿದ ಸಹಾಯ ಮಾಡುತ್ತಿದ್ದೆವು. ಕಾಂಗ್ರೆಸ್ಸಿನ working committee ಯ ಸದಸ್ಯರೆಲ್ಲರೂ ಸೇರಿ ಮುಂದಿನ ಯೋಜನೆಗಳನ್ನು ರೂಪಿಸುವಲ್ಲಿ ಈ ಸಮಯ ತುಂಬಾ ಅನುಕೂಲವಾಗಿತ್ತು. ಭಾಷ್ಯಂ ಅವರ ಮನೆ ನಮಗೆಲ್ಲರಿಗೂ ತುಂಬ ಪ್ರಿಯವಾಗಿತ್ತು. ಅವರ ಶ್ರೀಮತಿಯವರು ತೂಗುಯ್ಯಾಲೆಯಲ್ಲಿ ಕುಳಿತು ವಿಶ್ರಾಂತಿ ಪಡೆಯುತ್ತಿದ್ದರು. ನಾವು ಎಷ್ಟೋ ಬಾರಿ ಅವರ ಮನೆಯಲ್ಲಿ ಊಟ ಮಾಡಿದ್ದಿದೆ. ಭಾಷ್ಯಂರವರು ತಮ್ಮ ಅನುಯಾಯಿಗಳು ಹಾಗೂ ಸಹೋದ್ಯೋಗಿಗಳು ಯೋಗ್ಯ ಶಿಕ್ಷಣ ಪಡೆಯಬೇಕೆಂದು ಆಶಿಸಿದ್ದರು. ಜೈಲಿನಲ್ಲಿದ್ದಾಗ ಉಳಿದ ಅನಕ್ಷರಸ್ಥ ಖೈದಿಗಳಿಗೆ ಅಕ್ಷರ ಹೇಳಿಕೊಡುತ್ತಿದ್ದರು. ಪ್ರತಿ ಭಾನುವಾರ ರಾಮಕೃಷ್ಣಾಶ್ರಮದಿಂದ ಸ್ವಾಮಿಗಳು ಬಂದು ಎಲ್ಲ ಸತ್ಯಾಗ್ರಹಿಗಳಿಗೆ ಉಪದೇಶ ಮಾಡುವ ವ್ಯವಸ್ಥೆಯನ್ನು ಭಾಷ್ಯಂ ಜೈಲಿನಲ್ಲಿ ಮಾಡಿಸಿದ್ದರು. ಅನೇಕ ಬಾರಿ ಭಾಷ್ಯಂ ಸ್ವತಃ ಕಾನೂನು ಹಾಗೂ ಉಳಿದ ಕಡೆಗಳ ರಾಜಕೀಯ ವ್ಯವಸ್ಥೆಗಳ ಕುರಿತು ನಮ್ಮೆಲ್ಲರಿಗೂ ತಿಳಿಸಿ ಹೇಳುತ್ತಿದ್ದರು.

ಭಾಷ್ಯಂ ಅವರ ವ್ಯಕ್ತಿತ್ವವನ್ನು ಈ ಕೆಳಗಿನ ಶಬ್ದಗಳಲ್ಲಿ ವಿವರಿಸಬಹುದು: ಸ್ವಾತಂತ್ರ್ಯಕ್ಕೆಂದು ಜೀವ ಮುಡುಪಾಗಿಟ್ಟವರು, ಅತ್ಯಂತ ಧೈರ್ಯಶಾಲಿಗಳು, ಲಾಠಿಗೆ ಬೆನ್ನು ಒಡ್ಡಿ ಎನ್ನುವಂತಹವರು.

ಇವರು ಅತ್ಯಂತ ಸ್ನೇಹ ಜೀವಿಗಳು. ನನಗೆ ತಿಳಿದಂತೆ ಮಗುವಿನಂತಹ ಮುಗ್ಧ ಮನಸ್ಸಿನವರು. ಕೋರ್ಟಿನಿಂದ ಬರುವಾಗ ಸ್ನೇಹಿತರಿಗೆಂದು ಅಂಗಡಿಗಳಿಂದ ಪೆಪ್ಪರ್‌ಮೆಂಟ್ ತರುತ್ತಿದ್ದರೆಂಬುದನ್ನು ನೀವು ನಂಬುವಿರಾ? "

೯. **ಜೇಮ್ಸ್ ಮ್ಯಾನೋರ್, ಲೆಸ್ಟರ್ ವಿಶ್ವವಿದ್ಯಾಲಯ, ಇಂಗ್ಲೆಂಡ್** (ಪ್ರೊ. ಜೇಮ್ಸ್ ಮ್ಯಾನೋರ್ ಇವರು ಇಂಗ್ಲೆಂಡಿನ ಪ್ರಖ್ಯಾತ ರಾಜಕೀಯ ಇತಿಹಾಸಜ್ಞರು. ಆಧುನಿಕ ಕರ್ನಾಟಕದ ರಾಜಕೀಯ ಚರಿತ್ರೆಯನ್ನು, ಅದರಲ್ಲಿಯೂ ವಿಶೇಷವಾಗಿ ಶ್ರೀ ದೇವರಾಜ್ ಅರಸು ಅವರ ಕಾಲವನ್ನು ಅತ್ಯಂತ ಸಮರ್ಪಕ ಹಾಗೂ ವಿಶ್ಲೇಷಣಾತ್ಮಕ ರೀತಿಯಲ್ಲಿ ಇವರು ನಿರೂಪಿಸಿದ್ದಾರೆ. ಕೆ.ಟಿ. ಭಾಷ್ಯಂ ಅವರನ್ನು ಕುರಿತು ಇವರ ರಾಜಕೀಯ ಅವಲೋಕನದ, ಹಾಗೂ ಆ ಕಾಲದ ಕರ್ನಾಟಕದ ರಾಜಕೀಯ ಸಂದರ್ಭದ ವಿವರಣೆಯ ಮೂಲ ಸ್ವರೂಪದ ಸ್ವಲ್ಪ ಭಾಗವನ್ನು ಆಂಗ್ಲಭಾಷೆಯಲ್ಲಿ ಕೆಳಗೆ ನೀಡಲಾಗಿದೆ.):-

" In their carry encouters with the workers, the outsiders met with distrust and even with hostility. But those who persisted were in most cases were successful in taking over the leadership of the unions. The most important outsiders to undertake such works were K.T. Bhashyam and P.M. Rama Sharma, two young Bangalore Brahmins of Tamil Extraction who were closely linked with efforts to develop a Congress organization in Bangalore. They worked patiently among labourers of the capital (who were predominantly Tamil and overwhelmingly non-Brahmin) and, gradually during the 1920s, won their confidence. By 1929 these two men succeeded in establishing under their leadership a labour association which linked the unions from every major factory in Bangalore, and the State railway union including workers at the railway works in Mysore city. They were less successful in their efforts among the workers in the Bhadravati iron works and the Kolar gold fields -the former because of its distance from the capital., the later because of intense factionalism among the mainly Depressed Class labourers). These Congressmen undertook such work because they were genuinely interested in improving the workers lives. But they also did so in order to develop a following for themselves personally and - more importantly - for the Congress organization which, during the 1920s, they were seeking to build. In this they succeeded. In later years, their work as advocates for labourers' welfare would be repaid by the workers' willingness to provide manpower for Congress demonstrations in two major cities of the state.

"Bhashyam was an Iyengar lawyer with a modestly successful practice, a man of great refinement who commanded universal respect. He was the leading Brahmin figure in the Congress struggle against the government after 1937 and a minister in the first Congress Cabinet in Mysore (1947-52)."

"Bhashyam's great contribution was his ability to bridge the dichotomy between the particians and the poorer nationalists in the capital. During the early 1930s, the beginning of a sustained Congress efforts were discernible around Bhashyam."

" ............. During the first week in October, the 'Council of Action' was arrested and the Congress office was raided by the police who seized partly records. This brought a protest from Nehru to the Dewan and the state Congress then called an 'agitation' against the government. The most universally respected politician in Mysore. .... K.T. Bhashyam, was appointed party 'dictator' to lead the campaign. ....... on 14th October, the members of the Representative Assembly including Bhashyam and all of the non-Brahmin leaders gathered in Mysore city for the autumn sitting which was to begin the next day. In the early hours of the morning of the 15th, police arrested Bhashyam at his hotel. Infuriated that Bhashyam should be arrested while preparing to participate in the legislative session. Reddy consulted other non-Brahmin leaders towards dawn and resolved upon a merger."

**೧೦. ಜ್ಯೋರ್ಜ್ ಹೆಟ್ನೆ, ಆಯರ್‌ಲ್ಯಾಂಡ್** (ಪ್ರೊ. ಜ್ಯೋರ್ಜ್ ಹೆಟ್ನೆ) ಇವರು ಮೂಲತಃ ರಾಜಕೀಯ ಇತಿಹಾಸಕತಜ್ಞರು. ಈ ಶತಮಾನದ ಎರಡನೇ ದಶಕದಿಂದ ಸ್ವಾತಂತ್ರ್ಯ ದೊರಕುವವರೆಗಿನ ಮೈಸೂರಿನ ರಾಜಕೀಯ-ಆರ್ಥಿಕ ಪರಿಸ್ಥಿತಿಯನ್ನು ಕುರಿತು ಇವರು ಬಹಳ ಪರಿಣಾಮಕಾರಿಯಾದ ಗ್ರಂಥವೊಂದನ್ನು ಬರೆದಿದ್ದಾರೆ. ಈ ಹೊತ್ತಿಗೆಯಿಂದ ಭಾಷ್ಯಂ ಅವರ ಜೀವನದ ಮೇಲೆ ಬೆಳಕು ಚೆಲ್ಲುವ ಕೆಲವು ವಾಕ್ಯಗಳನ್ನು ಇಲ್ಲಿ ಎತ್ತಿಕೊಳ್ಳಲಾಗಿದೆ.):-

(p.86-K.T. Bhashyam on Sir Mirza Ismail in an interview the *Tai Naadu* May 1941.)

" Though we differed in our views, I held him in high esteem and I had personal regard for him ..... I had the hope that he would try to bring about cordial and friendly relations with us, thereby facilitating the establishment peace and contentment in the public life of the State...."

## ಭಾಗ - 5

## ಭಾಷ್ಯಂ ಜೀವನದ ವಿವಿಧ ಆಯಾಮಗಳು

ಭಾಷ್ಯಂ ಅವರ ಜೀವನೋತ್ಸಾಹ ಎಲ್ಲರನ್ನೂ ದಂಗು ಬಡಿಸುವಂತಹದು. ಅವರಿಗೆ ಎಲ್ಲವನ್ನೂ ಕಲಿಯುವ, ಅರ್ಥೈಸಿಕೊಳ್ಳುವ, ಪ್ರಯೋಗಕ್ಕೆ ತರುವ ಆಸೆ. ಅಂತೆಯೇ ಎಚ್ಚರವಿದ್ದ ಪ್ರತಿಕ್ಷಣವನ್ನೂ ಅವರು ಓದಿನಲ್ಲಿ, ಚರ್ಚೆಯಲ್ಲಿ ಅಥವಾ ಆಧ್ಯಾತ್ಮಿಕ ಚಿಂತನೆಯಲ್ಲಿ ಕಳೆಯುತ್ತಿದ್ದರು. ಹಳೆಯದನ್ನು ಪೂರ್ಣವಾಗಿ ಬಿಡದ ಹೊಸದನ್ನು ತಿರಸ್ಕರಿಸದೆ ಯಾವುದೇ ದ್ವಂದ್ವಕ್ಕೆ ಒಳಗಾಗದೆ ಅವರು ಜೀವನವನ್ನು ಸ್ವೀಕರಿಸಿದ್ದು ಉದಾಹರಣೀಯ. ಅವರು ಪದೇ ಪದೇ ಹೇಳುತ್ತಿದ್ದ ಭಗವದ್ಗೀತೆಯ ವಾಕ್ಯವನ್ನು ಗಮನಿಸೋಣ:

"ವಾಸಾಂಸಿ ಜೀರ್ಣಾನಿ ಯಥಾ ವಿಹಾರ ನವಾನಿ ಗೃಹ್ಣಾತಿ ನರೋಪರಾಣಿ।

ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ ಸಂಯಾತಿ ನವಾನಿ ದೇಹಿ॥

(ಮಾನವನು ತನ್ನ ಹಳೆಯ ಬಟ್ಟೆಗಳನ್ನು ಕಳಚಿ, ನವ ವಸ್ತ್ರ ಧಾರಣೆ ಮಾಡುವಂತೆ, ತನ್ನ ಹಳೆಯ-ಘಾಸಿಗೊಂಡ ಶರೀರವನ್ನು ತ್ಯಜಿಸಿ ಆತ್ಮವು ಹೊಸ ದೇಹ ಧಾರಣೆ ಮಾಡುತ್ತದೆ.)

ಭಾಷ್ಯಂ ಅವರ ಜೀವನದ ಇಂಥ ಒಂದು ಉದಾಹರಣೆಯನ್ನು ನಾನಿಲ್ಲಿ ಮಂಡಿಸಬಯಸುವೆ. ಭಾಷ್ಯಂ ಅವರಲ್ಲಿ ಜ್ಯೋತಿಷ ಶಾಸ್ತ್ರದಲ್ಲಿ ಅಪಾರವಾದ ನಂಬಿಕೆಯಷ್ಟೇ ಅಲ್ಲ ಆಳವಾದ ಅಧ್ಯಯನವೂ ಸೇರಿಕೊಂಡಿತ್ತು. ತಮ್ಮ ಸೆರೆಮನೆ ವಾಸದಲ್ಲಿ ಅವರು ತಮ್ಮೊಡನಿದ್ದ ಉಳಿದ ಸತ್ಯಾಗ್ರಹಿಗಳಲ್ಲಿ ಹಲವರಿಗೆ ಜ್ಯೋತಿಷ ಶಾಸ್ತ್ರದಲ್ಲಿ ಪಾಠಗಳನ್ನು ನೀಡುತ್ತಿದ್ದರೆಂದು ಶ್ರೀ ಎ. ಜಿ. ರಾಮಚಂದ್ರರಾವ್ ಅವರು ಉಲ್ಲೇಖಿಸಿದ್ದಾರೆ. ೧೯೫೬ನೇ ವರ್ಷವನ್ನು ದಾಟುವುದು ತಮಗೆ ಕಠಿಣವಾದೀತೆಂದು ಭಾಷ್ಯಂ ಸ್ನೇಹಿತರಿಗೆ ಹೇಳಿದಾಗ ಆರೋಗ್ಯಪೂರ್ಣ ವ್ಯಕ್ತಿತ್ವದ ಅವರ ಈ ಮಾತನ್ನು ಯಾರೂ ಗಂಭೀರವಾಗಿ ಪರಿಗಣಿಸಲಿಲ್ಲ. ೧೯೫೬ರಲ್ಲಿ ಅವರು ಹಠಾತ್ತಾಗಿ ತೀರಿಕೊಂಡಾಗ ರಾಮಚಂದ್ರರಾಯರಂತಹ ಅವರ ಅನೇಕ ಅನುಯಾಯಿಗಳು ಧಿಗ್ಭ್ರಮೆಗೊಂಡು ಈ ಬಗ್ಗೆ ಪ್ರಸ್ತಾಪಿಸಿದ್ದಾರೆ. ಜ್ಯೋತಿಷ್ಯದಲ್ಲಿ ನಂಬಿಕೆ ಇದ್ದರೂ ಅದಕ್ಕೆ ಜೋತು ಬಿದ್ದವರಲ್ಲ ಭಾಷ್ಯಂ. ನಮ್ಮ ಕರ್ತವ್ಯವನ್ನು ನಾವು ನಿಷ್ಠೆಯಿಂದ ಮಾಡುತ್ತಾ ಹೋಗೋಣ. ದೈವೀ ಸಂಕಲ್ಪ ಹೇಗಿದೆಯೋ ಅದನ್ನು ನಿಸರ್ಗಕ್ಕೆ ಬಿಡೋಣ ಎಂಬುದು ಭಾಷ್ಯಂರವರ ಖಚಿತ ಅಭಿಪ್ರಾಯವಾಗಿತ್ತು. ಜ್ಯೋತಿಷ ವಿದ್ಯೆಯಲ್ಲಿ ಅವರಿಗಿದ್ದ ಪಾಂಡಿತ್ಯವು ಎಷ್ಟರಮಟ್ಟಿಗೆ ಆಳವಾಗಿತ್ತೆಂಬುದನ್ನು ತಮ್ಮ ಸಾವಿನ ಕುರಿತಾಗಿ ಭಾಷ್ಯಂ ಹೇಳಿದ್ದರಿಂದಲೇ ಕಂಡುಕೊಳ್ಳಬಹುದು. ಈ ಶಾಸ್ತ್ರವನ್ನು ವೈಜ್ಞಾನಿಕವಾಗಿ ಅಭ್ಯಸಿಸಿ ಇದಕ್ಕೆ ಒಂದು ಸ್ಪಷ್ಟ ಸ್ವರೂಪವನ್ನು ನೀಡುವ ಕುರಿತೂ ಭಾಷ್ಯಂ ಉಳಿದ ಸಹಚರರೊಂದಿಗೆ ಪ್ರಸ್ತಾಪಿಸಿದ್ದನ್ನು ಇಲ್ಲಿ ಬರೆಯುವುದು ಅಗತ್ಯ.

ಅನೇಕ ಬಾರಿ ಶ್ರೇಷ್ಠ ವ್ಯಕ್ತಿಗಳ ಜೀವನದ ಕೆಲವು ವಿಶೇಷ ಮಗ್ಗಲುಗಳು ಜನಮನಕ್ಕೆ ತಲುಪುವುದೇ ಇಲ್ಲ. ಇದಕ್ಕೆ ಕಾರಣ ಇಂಥ ವ್ಯಕ್ತಿಗಳ ಯಾವುದೋ ಒಂದು ಜೀವನ ಭಾಗ ಸಿಂಹ ಪಾಲಿನ ಸ್ಥಳವನ್ನು ಆಕ್ರಮಿಸಿಬಿಡುತ್ತದೆ. ಉಳಿದ ಸೂಕ್ಷ್ಮ ಅಂಶಗಳು ಈ ಮುಖ್ಯ ಭಾಗದ ನೆರಳಿನಲ್ಲಿ ಅಡಗಿ ಸಾಮಾನ್ಯರ ದೃಷ್ಟಿಯಿಂದ ಮರೆಯಾಗುತ್ತದೆ. ಭಾಷ್ಯಂ ಅಯ್ಯಂಗಾರ್

ಅವರಿಗೆ ಜ್ಯೋತಿಷ ಶಾಸ್ತ್ರದಲ್ಲಿ ವಿಶೇಷ ರೀತಿಯ ಅಭ್ಯಾಸ-ಅಧ್ಯಯನಗಳು ಇದ್ದ ವಿಚಾರವು ಹೀಗೆ ಮರೆಯಾದ ಸಂಗತಿಗಳಲ್ಲೊಂದು. ಅದೇ ರೀತಿಯಾಗಿ ಭಾಷ್ಯಂ ಅವರಿಗೆ ಕಲೆ-ಸಂಗೀತಗಳಲ್ಲೂ ಇದ್ದ ವಿಶೇಷ ಒಲವನ್ನು ಅನೇಕರು ಇದುವರೆಗೂ ಗಮನಿಸಿದಂತಿಲ್ಲ. ಆದ್ದರಿಂದ ಅವರ ಇಂಥ ಅಭಿರುಚಿಗಳ ಒಂದೆರಡು ಅನುಭವಗಳನ್ನು ಭಾಷ್ಯಂ ಅವರ ಸಹವರ್ತಿಗಳ ಬಾಯಿಂದಲೇ ತಿಳಿಯಬಹುದು.

ಕರ್ನಾಟಕ ಸಂಗೀತ ರತ್ನಗಳಲ್ಲಿ ಒಬ್ಬರಾದ ಶ್ರೀ ಟಿ. ಚೌಡಯ್ಯನವರು ವಿಧಾನ ಪರಿಷತ್ತಿಗೆ ೫೦ರ ದಶಕದಲ್ಲಿ ನಾಮನಿರ್ದೇಶನ ಹೊಂದಿದವರು. ಅವರು ಪರಿಷತ್ತಿನಲ್ಲಿ ಭಾಷ್ಯಂರವರ ಸಾವಿನ ಕುರಿತಾದ ಶೋಕ ಸೂಚಕ ಸಭೆಯಲ್ಲಿ ಮಾತನಾಡುತ್ತ ಭಾಷ್ಯಂ ಅಯ್ಯಂಗಾರರವರ ಸಂಗೀತದ ಅಭಿರುಚಿಯನ್ನು ಕುರಿತು ಅನೇಕ ಉದಾಹರಣೆಗಳನ್ನು ನೀಡಿದ್ದಾರೆ. ಅವರ ವಾಕ್ಯಗಳಲ್ಲಿಯೇ ಈ ವಿಷಯವನ್ನು ವಿವರಿಸುವುದು ಹೆಚ್ಚು ಸೂಕ್ತ. ಶ್ರೀ ಭಾಷ್ಯಂ ಅವರೇ ಸ್ವತಃ ಬೆಂಗಳೂರಿನ ಅರಳೆ ಪೇಟೆ ದೇವಸ್ಥಾನದಲ್ಲಿ ಚೌಡಯ್ಯನವರ ಪಿಟೀಲಿನ ಕಚೇರಿಯನ್ನು ಏರ್ಪಾಡು ಮಾಡಿದ್ದರು. ಆ ಸಮಯದಲ್ಲಿ ಶ್ರೀ ಚೌಡಯ್ಯನವರೇ ಹೇಳಿದಂತೆ, "ಆ ಹೊತ್ತು ನಾನು ಹೇಗೆ ಬಾರಿಸಬೇಕೆಂದು ಹೇಳಿದರು." ಆಗ ನಾನು "ಹೇಗೆ ಬಾರಿಸಬೇಕೆಂದು ಅಪ್ಪಣೆ ಕೊಡಿಸಿ" ಎಂದು ಕೇಳಿದೆ. ಅದಕ್ಕೆ ಅವರು "ನಾನು ಕಣ್ಣು ಮುಚ್ಚಿ ನಾದದಲ್ಲಿ ಮುಳುಗುವ ಹಾಗೆ ಬಾರಿಸಬೇಕು" ಎಂದು ಗಂಭೀರವಾಗಿ ನುಡಿದರು. ಎರಡು-ಮೂರು ಕೀರ್ತನೆಗಳ ಹೆಸರುಗಳನ್ನೂ ಸೂಚಿಸಿ ಅವುಗಳನ್ನು ಬಾರಿಸಬೇಕೆಂದು ಬಯಸಿದರು. ರಾಜಕೀಯದಲ್ಲಿ ಮುಳುಗಿದ್ದರೂ ಸಂಗೀತದಲ್ಲಿ ಅವರಿಗೆ ತುಂಬಾ ಜ್ಞಾನವಿತ್ತು. ಜ್ಯೋತಿಷ್ಯದಲ್ಲಿಯೂ ಅವರಿಗೆ ಹೆಚ್ಚಿನ ಜ್ಞಾನವಿತ್ತು. ಅವರು ಮಾಡಿಕೊಟ್ಟ ಮೂಲಪಟ್ಟಿಯಲ್ಲಿ

"ಘಷ್ಯತೆ ಯಸ್ಯ ನಗರೇ ರಂಗಯಾತ್ರಾ ದಿನೇ ದಿನೇ।
ತಮಹಂ ಶಿರಸಾ ವಂದೇ ರಾಜಾನಂ ಕುಲಶೇಖರಮ್॥"

ಹಾಗೂ

"ಜಯತು ಜಯತು ದೇವೋ ದೇವಕೀ ನಂದನೋಯಮ್।
ಜಯತು ಜಯತು ಕೃಷ್ಣೋ ವೃಷ್ಣೀವಂಶ ಪ್ರದೀಪಃ॥"

ಈ ಎರಡು ಶ್ಲೋಕಗಳಿದ್ದವು. ಆಮೇಲೆ 'ಶ್ರೀ ವೇಣುಗೋಪಾಲ' ಎಂಬ ಕೀರ್ತನೆಯನ್ನು ಬಾರಿಸು ಎಂದರು. ಹೀಗೆ ಚೌಡಯ್ಯನವರಂತಹ ಘನ ಸಂಗೀತ ವಿದ್ವಾಂಸರಿಗೂ ಆಶ್ಚರ್ಯ, ಆತ್ಮೀಯತೆಗಳನ್ನು ತಂದ ಭಾಷ್ಯಂರವರ ಸಂಗೀತ ಪ್ರೇಮ ನಿಜಕ್ಕೂ ಎಲ್ಲರೂ ಮೆಚ್ಚುವಂತಹದ್ದು.

ಗುಬ್ಬಿ ವೀರಣ್ಣನವರಂಥ ನಾಡಿನ ಹಿರಿಯ ಕಲಾವಿದರು ಭಾಷ್ಯಂ ಅವರ ಕಲಾಪ್ರಿಯತೆಯನ್ನು ಮೆಚ್ಚಿಕೊಂಡು ಹೊಗಳಿದ್ದನ್ನು ಈ ಸಂದರ್ಭದಲ್ಲಿ ಬರೆಯುವುದು ಅತಿ ಉಚಿತ. ೧೯೫೨-೫೩ರ ಸುಮಾರಿಗೆ ಒಂದು ಶೈಕ್ಷಣಿಕ ಸಂಸ್ಥೆಯ 'ಸಹಾಯಾರ್ಥ ಪ್ರದರ್ಶನ'ಕ್ಕೆಂದು ಆ ಸಮಯದಲ್ಲಿ ಕರ್ನಾಟಕದ ತುಂಬೆಲ್ಲ ಪ್ರಸಿದ್ಧವಾದ 'ಸದಾರಮೆ ನಾಟಕ'ವನ್ನು ಇಡಲಾಗಿತ್ತು. ಆ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸುವಂತೆ ನಾಟಕದ ಸಂಘಟಕರು ಭಾಷ್ಯಂ

ಅಯ್ಯಂಗಾರ್‌ರನ್ನು ಕೋರಿದ್ದರು. ಅಂದು ಭಾಷ್ಯಂ ಮಾಡಿದ ಅಧ್ಯಕ್ಷ ಭಾಷಣದ ಕುರಿತು 'ನಟ ಭಯಂಕರ' ಬಿರುದಾಂಕಿತ ಗುಬ್ಬಿ ವೀರಣ್ಣನವರೇ ಈ ರೀತಿ ಹೇಳಿದ್ದಾರೆ: "ಅವರನ್ನು (ಭಾಷ್ಯಂರನ್ನು) ಅಧ್ಯಕ್ಷರಾಗಿ ಮಾಡಿದಾಗ ಅವರು ತೋರ್ಪಡಿಸಿದ ಕಲಾ ನೈಪುಣ್ಯತೆ ನಮ್ಮನ್ನೇ ಮುಗ್ಧಗೊಳಿಸಿತು. ಆ 'ಸದಾರಮೆ' ನಾಟಕದಲ್ಲಿ ನಾನೇ ಕಳ್ಳನ ಪಾತ್ರ ವಹಿಸಿದ್ದೆ, ಕಾರಣ ಹಾಸ್ಯರಸ ಅದರಲ್ಲಿ ವಿಶೇಷವಾಗಿತ್ತು. ನಾಟಕವಾದ ಮೇಲೆ ಅಧ್ಯಕ್ಷರು ಮಾತನಾಡಿದ್ದನ್ನು ನಾನು ಇಂದಿಗೂ ಮರೆಯುವಂತಿಲ್ಲ. ಏಕೆಂದರೆ ನನ್ನ ಹಾಸ್ಯರಸವೆಲ್ಲ ಅವರ ಹಾಸ್ಯದ ಮುಂದೆ ಮುಳುಗಿ ಹೋಗಿ ನಾವೇಕೆ ಅವರನ್ನು ಅಧ್ಯಕ್ಷ ಭಾಷಣಕ್ಕೆ ಕರೆಸಿದೆವೋ ಅಂದುಕೊಂಡೆ. ಅಷ್ಟು ರಸಿಕರು, ಹಾಸ್ಯ ಪ್ರಿಯರು ಅವರು. ಅವರಿಗೂ ಸ್ವಲ್ಪ ಬಣ್ಣ ಕೊಟ್ಟಿದ್ದರೆ ನನಗಿಂತಲೂ ಹೆಚ್ಚಿಗೆ ಚೆನ್ನಾಗಿ ನಟಿಸುತ್ತಿದ್ದರೆಂದು ತೋರುತ್ತಿತ್ತು. ಅಂಥ ಕಲಾನೈಪುಣ್ಯತೆಯು ಅವರಲ್ಲಿತ್ತು."

ಭಾಷ್ಯಂ ಅವರದು ನಿಜವಾದ ಅರ್ಥದಲ್ಲಿ ತುಂಬು ಜೀವ, ಅವರ ವ್ಯಕ್ತಿತ್ವವು ಒಂದು ತುಂಬಿದ ಕೊಡ. ಇಂಥ ಮೇರು ವ್ಯಕ್ತಿತ್ವಕ್ಕೆ ಕಳಶಪ್ರಾಯವಾದದ್ದು ಅವರಿಗೆ ಸಾಹಿತ್ಯದಲ್ಲಿ ಇದ್ದ ಒಲವು, ಆಸಕ್ತಿ. ತಾವು ಓದುವುದಷ್ಟೇ ಅಲ್ಲದೆ ಓದಿದ್ದನ್ನು ಅರಗಿಸಿಕೊಂಡು ಉಳಿದವರೊಂದಿಗೆ ಹಂಚಿಕೊಳ್ಳುವ ಉತ್ತಮ ಹವ್ಯಾಸ ಅವರದಾಗಿತ್ತು. ಅಂತೆಯೇ ಉಳಿದವರೂ ಗ್ರಂಥಾಸಕ್ತರಾಗಿ, ಓದಿ, ಜ್ಞಾನದ ಲಾಭ ಪಡೆಯಬೇಕೆಂಬ ಹೆಬ್ಬಯಕೆ ಹೊಂದಿದ್ದವರು ಭಾಷ್ಯಂ. ಶ್ರೀ ಗೋರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಹೇಳಿರುವಂತೆ ಸೆರೆಮನೆಯಲ್ಲಿಯೂ ಭಾಷ್ಯಂ ನಾನಾ ವಿಧವಾದ ಉಪನ್ಯಾಸಗಳು, ಭಗವದ್ಗೀತೆ, ರಾಮಾಯಣ ಮುಂತಾದವುಗಳ ವ್ಯಾಸಂಗಕ್ಕಾಗಿ ಜೇಲರುಗಳನ್ನು ಕೋರಿ ಏರ್ಪಾಡು ಮಾಡುತ್ತಿದ್ದರು. ಜನರಲ್ಲಿ ಸಾಹಿತ್ಯದ ಮೂಲಕ ಜೀವನೋತ್ಸಾಹವನ್ನು ಹೆಚ್ಚಿಸಬೇಕೆಂಬುದು ಭಾಷ್ಯಂ ಅವರ ಖಚಿತ ನಿಲುವಾಗಿತ್ತು. "ನಾವು ಜೇಲಿನಲ್ಲಿದ್ದೇವೆ ಎಂದ ಮಾತ್ರಕ್ಕೆ ನಮ್ಮ ಸಮಸ್ತ ಶಕ್ತಿಯೂ ನಾಶವಾಯಿತೆಂದಲ್ಲ. ನಮ್ಮ ಶಕ್ತಿಯನ್ನು ಬೆಳೆಸಬೇಕು, ನಮ್ಮಲ್ಲಿ ಉತ್ಸಾಹವಿರಬೇಕು" ಎಂದು ಹೇಳಿ ಸೆರೆಮನೆಯಲ್ಲಿಯೇ ಅನೇಕ ಗ್ರಂಥಗಳ ವ್ಯಾಸಂಗಕ್ಕಾಗಿ ಭಾಷ್ಯಂ ವ್ಯವಸ್ಥೆ ಮಾಡಿಕೊಡುತ್ತಿದ್ದರು ಎಂದು ಖ್ಯಾತ ಲೇಖಕ ಗೋರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಹೃದಯ ತುಂಬಿ ನೆನಪಿಸಿಕೊಂಡಿದ್ದಾರೆ.

ವೇದಾಧ್ಯಯನದಲ್ಲಿ, ವಿಶೇಷವಾಗಿ ಉಪನಿಷತ್ ಮತ್ತು ಭಗವದ್ಗೀತೆಗಳ ಅಭ್ಯಾಸದಲ್ಲಿ, ಭಾಷ್ಯಂರವರಿಗೆ ಅಪರಿಮಿತ ಅಭಿರುಚಿ. ಸೆರೆಮನೆಯಲ್ಲಿದ್ದಾಗಲೂ ಬಂಧಿಖಾನೆಯ ಮತ್ತು ಸ್ಥಾನಬದ್ಧತೆಯ ಅನಿವಾರ್ಯತೆಯನ್ನು ಕುರಿತು ಯಾರಾದರೂ ದುಃಖಿಸಿದರೆ ಭಾಷ್ಯಂ ಅಂಥವರನ್ನು ಕರೆದು ಭಗವದ್ಗೀತೆಯ ಸಂದೇಶವನ್ನು ವಿವರಿಸುತ್ತಿದ್ದರು. ಟಿ. ಸುಬ್ರಹ್ಮಣ್ಯಂ ಅವರಂಥ ವಿದ್ವಜ್ಜನರು ಸೆರೆಮನೆಯಲ್ಲಿದ್ದಾಗ ಭಾಷ್ಯಂರವರು ಅವರನ್ನು ಕರೆದು ಉಪನಿಷತ್ತುಗಳಲ್ಲಿರುವ ಅಮೂಲ್ಯ ವಿಚಾರಗಳನ್ನು ತಮಗೆ ವಿವರಿಸಲು ಕೋರುತ್ತಿದ್ದರು. ಕೇವಲ ಸಂಸ್ಕೃತ ಸಾಹಿತ್ಯವಷ್ಟೇ ಅಲ್ಲದ ಸಮಕಾಲೀನ ಆಂಗ್ಲ ಸಾಹಿತ್ಯದಲ್ಲೂ ಭಾಷ್ಯಂ ಅವರಿಗೆ ಗಣನೀಯ ಅಧ್ಯಯನವಿತ್ತೆಂದು ಅವರ ಅನೇಕ ನಿಕಟವರ್ತಿಗಳು ತಿಳಿಸಿರುತ್ತಾರೆ. ಇದಕ್ಕೆ ಆಧಾರವಾಗಿ ತಮ್ಮ ಅಸಂಖ್ಯಾತ ಭಾಷಣಗಳಲ್ಲಿ, ರೂಲಿಂಗ್‌ಗಳಲ್ಲಿ ಭಾಷ್ಯಂ ಅವರು ಬಳಸಿದ ಸುಂದರ ಇಂಗ್ಲೀಷ್ ಭಾಷೆ, ನೀಡಿದ ಸಾಹಿತ್ಯಿಕ ಉದಾಹರಣೆಗಳು, ಮುಂತಾದವುಗಳನ್ನು ಹೇಳಬಹುದು. ಆಂಗ್ಲಭಾಷೆಯ ಮೇಲೆ ಅವರಿಗಿದ್ದ

ವ್ಯಕ್ತಪಡಿಸಿದ್ದಾರೆ. ಅಂತೆಯೇ ತಮಿಳು ಸಾಹಿತ್ಯದಲ್ಲಿಯೂ ಭಾಷ್ಯಂ ಅವರಿಗೆ ಸಹಜವಾದ ಆಸಕ್ತಿ ಹಾಗೂ ಆ ಪರಿಣಾಮವಾದ ಓದು ಇತ್ತೆಂದು ಊಹಿಸಬಹುದು. ಅವರ ಭಾಷಣಗಳಲ್ಲಿ ಹಲವು ಬಾರಿ ಸೊಗಸಾದ ತಮಿಳು ಗಾದೆಗಳು (ಉದಾಹರಣೆಗೆ - 'ಆನೆವರುಂ ಪಿನ್ನೆ ಮಣಿ ಒಪ್ಪೆವರುಂ ಮುನ್ನೆ' ಎಂದರೆ 'ಆನೆ ಹಿಂದಿನಿದ ಬರುತ್ತದೆ ಆನೆಯ ಘಂಟೆಯ ಶಬ್ದ ಮೊದಲೇ ಬರುತ್ತದೆ' ಇತ್ಯಾದಿ) ನಿರರ್ಗಳವಾಗಿ ಬರುವುದನ್ನು ಗಮನಿಸಬಹುದು.

ಆದಮ್ಯ ಉತ್ಸಾಹ ತುಂಬಿದ ಭಾಷ್ಯಂ ಅವರಿಗೆ ಕ್ರೀಡೆ, ವಿನೋದಗಳಲ್ಲಿ ಅತ್ಯಂತ ಸಹಜವಾಗಿಯೇ ಆಸಕ್ತಿ ಇತ್ತು. ಅನೇಕ ಆಟೋಟದ ಸ್ಪರ್ಧೆಗಳಲ್ಲಿ ಅವರು ಚಿಕ್ಕಂದಿನಲ್ಲಿ ಭಾಗವಹಿಸುತ್ತಿದ್ದುದನ್ನು ನಾವು ಕಾಣಬಹುದು. ನಂತರದ ವರ್ಷಗಳಲ್ಲಿಯೂ ಕ್ರೀಡೆಗಳ ಕುರಿತಾದ ಅವರ ಸದಭಿರುಚಿ ಮುಂದುವರಿಯಿತು. ಅವರ ಹೋಡಿಯ ಮಾತುಗಳಲ್ಲಿ, ಅಷ್ಟೇ ಅಲ್ಲ ತಾತ್ವಿಕ ಚಿಂತನೆಯಲ್ಲಿಯೂ ಕೂಡ ಕ್ರೀಡೆಗಳಲ್ಲಿ ಬಳಸುವ ಶಬ್ದಗಳ ಬಳಕೆ ಸಾಮಾನ್ಯವಾಗಿತ್ತು. ಉದಾಹರಣೆಗೆ ಒಮ್ಮೆ ಅನಾರೋಗ್ಯದ ಸಮಯದಲ್ಲಿ ವಿಚಾರಿಸಲು ಹೋದ ಸ್ನೇಹಿತ ಶ್ರೀ ಟಿ. ಸುಬ್ರಹ್ಮಣ್ಯಂ ಅವರೊಂದಿಗೆ ಭಾಷ್ಯಂ "I have played my innings" (ನಾನು ನನ್ನ ಇನ್ನಿಂಗ್ಸ್ ಆಡಿ ಮುಗಿಸಿದ್ದೇನೆ) ಎಂದು ಹಸನ್ಮುಖಿಗಳಾಗಿ ಹೇಳಿದರಂತೆ. ಸಾವನ್ನು ನಗುನಗುತ್ತ ಎದುರು ನೋಡುವ ಅಸಾಮಾನ್ಯ ವ್ಯಕ್ತಿಯಾಗಿದ್ದರು ಭಾಷ್ಯಂ.

ಭಾಷ್ಯಂ ಕೃಷಿ ರಂಗದಲ್ಲಿಯೂ ಸಾಕಷ್ಟು ಆಸ್ಥೆ-ಅಭಿರುಚಿ ಉಳ್ಳವರಾಗಿದ್ದರು. ತಮ್ಮ ಚೂರು-ಪಾರು ಉಳಿತಾಯದ ಹಣದಲ್ಲಿ ಬೆಂಗಳೂರು ಉತ್ತರ ತಾಲೂಕಿನ ಕೆಂಗೇರಿ ಹೋಬಳಿಯ ಪಟ್ಟಣಗೆರೆ ಎಂಬ ಹಳ್ಳಿಯಲ್ಲಿ ಹದಿನೈದು ಎಕರೆ ಜಮೀನು ಖರೀದಿಸಿದ್ದರು. ಈ ಜಮೀನಿನಲ್ಲಿ ಅವರ ಅನೇಕ ವರ್ಷಗಳ ಕನಸಾದ ಕಬ್ಬು, ಭತ್ತ ಬೆಳೆಯಬೇಕೆಂಬ ಆಸೆಯ ಪ್ರಯೋಗ ಅವರಿಂದ ನಡೆಯಿತು. ಆದರೆ ಈ ಜಮೀನಿಗೆ ಹೋಗಲು ಯಾವುದೇ ಬಸ್ಸಿನ ಸೌಕರ್ಯವಿಲ್ಲದ್ದರಿಂದ ನಾಯಂಡಹಳ್ಳಿ ಎಂಬ ರೈಲು ನಿಲ್ದಾಣದಲ್ಲಿ ಇಳಿದು ಜಮೀನಿನವರೆಗೆ ಸಾಕಷ್ಟು ದೂರ ನಡೆದೇ ಹೋಗಬೇಕಾಗುತ್ತಿತ್ತು. ಜಮೀನಿನಲ್ಲಿ ಇದ್ದ ಭಾವಿಯ ಕಾರಣದಿಂದ ಹೇರಳ ನೀರಿನ ಪೂರೈಕೆ ಇದ್ದುದರಿಂದಾಗಿ ಭಾಷ್ಯಂ ಒಂದು ವರ್ಷ ಅಲ್ಲಿ ಕಬ್ಬು ಬೆಳೆದರು. ಸೊಗಸಾದ ಫಸಲೇನೋ ಬಂತು. ಆದರೆ ತನ್ನದೆಲ್ಲವನ್ನೂ ಉಳಿದವರಿಗಾಗಿಯೇ ಜೀವನದ ಉದ್ದಕ್ಕೂ ಮುಡುಪಾಗಿಟ್ಟಿದ್ದ ಈ ಮಹೋದಯರು ಜಮೀನಿನಲ್ಲಿ ಬೆಳೆದ ಕಬ್ಬನ್ನು ಅರೆದು ಬೆಲ್ಲ ಮಾಡಿಸಿ ಉಳಿದವರಿಗೆ ಹಂಚಿದರು. ಯಾರಿಂದಲೂ ಹಣ ತೆಗೆದುಕೊಳ್ಳಲಿಲ್ಲ.

ಮತ್ತೊಂದು ವರ್ಷ ಈ ಜಮೀನಿನಲ್ಲಿ ಭಾಷ್ಯಂ ಭತ್ತ ಬೆಳೆದರು. ಆ ಸಮಯದಲ್ಲಿ ಅವರು ಭತ್ತ ಬೆಳೆಯುವ ಅನೇಕ ಪ್ರದೇಶಗಳಿಗೆ ಹೋಗಿ ಈ ಬೆಳೆಯ ಕುರಿತು ವಿಶೇಷ ಮಾಹಿತಿ ಸಂಗ್ರಹಿಸಿದರು. ಪ್ರಯೋಗಶೀಲರಾದ ಭಾಷ್ಯಂ ಭತ್ತದ ಬೆಳೆಯಲ್ಲಿಯೂ ಕೆಲವು ಹೊಸ ಪ್ರಯೋಗಗಳನ್ನು ಮಾಡಿದರು. ಭತ್ತದ ಬೆಳೆ ಕೂಡ ತುಂಬ ಚೆನ್ನಾಗಿಯೇ ಬಂತು. ಫಸಲಿನ ಬಹು ಭಾಗವನ್ನು ಬೆಳೆದ ರೈತರಿಗೆ, ಕೆಲಸಗಾರರಿಗೆ ಭಾಷ್ಯಂ ಸಂತೋಷದಿಂದ ಕೊಟ್ಟುಬಿಟ್ಟರು. ಎಂದರೆ ಕೃಷಿಯಲ್ಲಿ ತಮಗಿರುವ ಕುತೂಹಲ ತಣಿಸಲೆಂದು, ಆ ರಂಗದಲ್ಲಿ ಹೊಸ ವಿಷಯ-ಪ್ರಯೋಗಗಳ ಜ್ಞಾನ ಗಳಿಸಲೆಂದು ಭಾಷ್ಯಂ ಭೂಮಿಯನ್ನು ಕೊಂಡಿದ್ದರೇ

ಕೈಲಾಸವಾಸಿಗಳಾದ ಮೇಲೆ ಮೈಸೂರು ಮಹಾರಾಜರಿಂದ ಹಾಗೂ ಮೈಸೂರು ಬ್ಯಾಂಕಿನಿಂದ ಅವರು ಮಾಡಿದ್ದ ಸಾಲವನ್ನು ತೀರಿಸಲೆಂದು ಪತ್ನಿ. ಕಲ್ಯಾಣಮ್ಮನವರು ಈ ಜಮೀನನ್ನು ಮಾರಾಟಮಾಡಬೇಕಾಯಿತು ಎನ್ನುವುದು ದುರ್ದೈವದ ಸಂಗತಿ.

ಭಾಷ್ಯಂ ಅವರ ಬಹುಮುಖ ವ್ಯಕ್ತಿತ್ವದ ಕುರಿತು ಅವರ ಅನೇಕ ನಿಕಟವ್ಯಕ್ತಿಗಳು ಬರೆದಿದ್ದಾರೆ. ಆದರೆ ಅವೆಲ್ಲವುಗಳಲ್ಲಿ ತುಮಕೂರಿನ ಆರ್. ಎಸ್. ಆರಾಧ್ಯರು ತಮ್ಮ 'ಮೈಸೂರು ಕಾಂಗ್ರೆಸ್ಸಿನ ಮುಂದಾಳುಗಳು' ಎಂಬ ಪುಸ್ತಕದಲ್ಲಿ ಬರೆದಿರುವ ವಾಕ್ಯಗಳು ಈ ಅಸಾಮಾನ್ಯ ವ್ಯಕ್ತಿಯ ಕುರಿತು ಒಂದು ಸಂಕ್ಷಿಪ್ತವಾಗಿದ್ದೂ ಕೂಡ ಸಮಗ್ರ ಚಿತ್ರಣ ನೀಡುತ್ತವೆ. ಆರಾಧ್ಯರು ಬರೆದಂತೆ "ಅಯ್ಯಂಗಾರರಿಗೆ ತಿಳಿಯದ ವಿಷಯವಿಲ್ಲ, ಗೊತ್ತಿಲ್ಲದ ಸಂಗತಿಯಿಲ್ಲ; ವೇದಾಂತದಿಂದ ವಿಜ್ಞಾನದವರೆಗೂ, ಹಸ್ತ ಸಾಮುದ್ರಿಕೆಯಿಂದ ಅರ್ಥಶಾಸ್ತ್ರದವರೆಗೂ, ರಂಗ ಭೂಮಿಯಿಂದ ರಾಜಕೀಯದವರೆಗೂ, ಸಾಹಿತ್ಯದಿಂದ ಪತ್ರಿಕೋದ್ಯಮದವರೆಗೂ ಎಲ್ಲವನ್ನೂ ಬಲ್ಲವರಾಗಿದ್ದಾರೆ. ಅವರ ವಿಷಯ ಸಂಗ್ರಹ ಅಷ್ಟೊಂದು ವ್ಯಾಪಕ; ಅಷ್ಟೊಂದು ಪ್ರಭಾವಯುತ. ಎಲ್ಲವನ್ನೂ ಕರತಲಾಮಲಕ ಮಾಡಿಕೊಂಡಿದ್ದಾರೆ. ಸುಂಗಿ ನೀರು ಕುಡಿದಂತಲ್ಲ, ಆಗಿದ್ದು ಅರಗಿಸಿಕೊಂಡಂತೆ ಅವರ ತಿಳುವಳಿಕೆ."

ಭಾಷ್ಯಂ ಪತ್ರಿಕೋದ್ಯಮ ಹಾಗೂ ಆಗಿನ ಉಳಿದ ಸಮೂಹ ಮಾಧ್ಯಮಗಳ ವಿಷಯದಲ್ಲಿಯೂ ಗಂಭೀರ ಆಸಕ್ತಿ ಉಳ್ಳವರಾಗಿದ್ದರು. ಪತ್ರಿಕೆಗಳು ಯಾವುದೇ ಸಮಾಜದ ಪರಿವರ್ತನೆಯ ದಾರಿಯಲ್ಲಿ ಮಹತ್ವದ ಪಾತ್ರ ವಹಿಸುವವೆಂದು ಭಾಷ್ಯಂ ಆಗಾಗ ಹೇಳುತ್ತಿದ್ದರು. ಪತ್ರಿಕೆಗಳು ತಮ್ಮ ಲೇಖನಗಳ ಮೂಲಕ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ದಾರಿಯನ್ನು ಸುಗಮಗೊಳಿಸುವುದನ್ನು ಗುರಿಯಾಗಿ ಇಟ್ಟುಕೊಳ್ಳಬೇಕು. ಆದರೆ ಕನ್ನಡದ ಅಂದಿನ ಹಲವು ಪತ್ರಿಕೆಗಳು ಮೈಸೂರಿನ ಸೊಬಗು, ಮಹಾರಾಜನ ಆಡಳಿತ ವೈಖರಿ, ಅರಮನೆಯ ಆತಿಥ್ಯ, ವಿದೇಶೀಯರ ಭೇಟಿ ಮುಂತಾದವನ್ನು ಆದರ್ಶವೆಂದು ಸಾರುವ ಮೂಲಕ ನಿಜವಾದ ಸಾಮಾಜಿಕ ಬದಲಾವಣೆಯ ಕೆಲಸದಲ್ಲಿ ತಡೆಯೊಡ್ಡುವವೆಂದು ಭಾಷ್ಯಂ ಅಕ್ಟೋಬರ್ ೬, ೧೯೩೭ರ ತಮ್ಮ ಭಾಷಣವೊಂದರಲ್ಲಿ ಹೇಳಿದ್ದರು. ಪತ್ರಿಕೆಗಳು ಸರ್ಕಾರದ ಪ್ರಚಾರದ ಸಾಧನಗಳಾಗಿ ಬದಲಾಗದೇ ಜನಸಾಮಾನ್ಯರ ಸಮಸ್ಯೆಗಳನ್ನೂ ಆಡಳಿತಶಾಹಿಯ ಕುಂದು ಕೊರತೆಗಳನ್ನೂ ಪ್ರತಿಬಿಂಬಿಸುವ ಕನ್ನಡಿಗಳಾಗಬೇಕು ಎಂದು ಭಾಷ್ಯಂ ವಾದಿಸುತ್ತಿದ್ದರು. ಈ ವಿಚಾರಗಳು ಭಾಷ್ಯಂರವರ ಪತ್ರಿಕೋದ್ಯಮ ಕುರಿತಾದ ಆಸ್ಥೆ, ಆಸಕ್ತಿಗಳನ್ನು ಬಿಂಬಿಸುತ್ತವೆ.

ಭಾಷ್ಯಂರವರ ಬಹುಮುಖ ಪ್ರತಿಭೆ ಹಾಗೂ ಧುರೀಣತ್ವದ ಶ್ರೇಷ್ಠತೆಯ ಕುರಿತು ಜೇಮ್ಸ್ ಮ್ಯಾನೋರ್ ತುಂಬಾ ಸೊಗಸಾಗಿ ಬರೆದಿದ್ದಾರೆ. ಅವರ ಅಭಿಪ್ರಾಯದಂತೆ ಹಲವು ಅಭಿರುಚಿಗಳ ಜನರನ್ನು, ಮುಖ್ಯವಾಗಿ ಮೈಸೂರು ಪ್ರಾಂತದ ಧುರೀಣರನ್ನು ಒಟ್ಟಾಗಿ ತರುವ ರಾಷ್ಟ್ರೀಯ ಕಾಂಗ್ರೆಸ್ಸಿನ ಪ್ರಯತ್ನಕ್ಕೆ ೧೯೩೦ರ ಹಾಗೂ ನಂತರದ ವರ್ಷಗಳಲ್ಲಿ ಭಾಷ್ಯಂ ಬೆನ್ನೆಲುಬಾಗಿದ್ದರು. ಜೋನ್ಸ್ ಪೆಟ್ನೆ ಎಂಬ ಲೇಖಕರೊಬ್ಬರು ಭಾಷ್ಯಂ ವಿಷಯದಲ್ಲಿ ಇದೇ ರೀತಿಯ ಅಭಿಪ್ರಾಯ ವ್ಯಕ್ತಪಡಿಸಿದ್ದರು. ಕೇವಲ ರಾಜಕೀಯಕ್ಕಷ್ಟೆ ತನ್ನ ಸಮಯವನ್ನು ಮುಡುಪಾಗಿಡದೆ ಜೀವನದ ಒತ್ತಡ, ಜಂಜಾಟಗಳ ನಡುವೆಯೂ ವೈವಿಧ್ಯಮಯ ಅಭಿರುಚಿಗಳನ್ನು ಭಾಷ್ಯಂ ಬೆಳೆಸಿಕೊಂಡಿದ್ದರು.

ಅರಮನೆಯಲ್ಲಿರಲಿ, ಸೆರೆಮನೆಯಲ್ಲಿರಲಿ ಭಾಷ್ಯಂ ಒಬ್ಬ ದಾರ್ಶನಿಕನಾಗಿ ಕಟ್ಟಾ ರಾಷ್ಟ್ರೀಯವಾದಿಯಾಗಿ ಅಪೂರ್ವ ವ್ಯಕ್ತಿ ಎನಿಸಿದ್ದಾರೆ.

ಭಾಷ್ಯಂ ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿ ಜೈಲಿಗೆ ಹೋಗಿದ್ದು, ಶಿಕ್ಷೆಯನ್ನು ಅನುಭವಿಸಿದ್ದು, ದೇಶವನ್ನು ಪ್ರೀತಿಸಿದ ಕಾರಣದಿಂದ ಅವಮಾನಿತರಾದದ್ದು ಲೆಕ್ಕವಿಲ್ಲದಷ್ಟು ಬಾರಿ. ಬಹುಶಃ ಅವರಷ್ಟು ಬಾರಿ ಸೆರೆಮನೆಯ ಶಿಕ್ಷೆ ಅನುಭವಿಸಿದವರು ಸ್ವಾತಂತ್ರ್ಯ ಹೋರಾಟಗಾರರಲ್ಲಿ ಕರ್ನಾಟಕದಲ್ಲಿ ಯಾರೂ ಇರಲಿಕ್ಕಿಲ್ಲ ಎನ್ನುವ ನಾರಾಯಣ ರಾವ್ ಅವರ ಮಾತಿನಲ್ಲಿ ಸತ್ಯವಡಗಿದೆಯೆನಿಸುತ್ತದೆ. ಸತ್ಯಾಗ್ರಹಿಯಾಗಿ ಅವರ ವಿಚಾರಧಾರೆ ಅತ್ಯಂತ ಸ್ಪಷ್ಟವಾಗಿತ್ತು. ಕಟ್ಟಾ ಗಾಂಧೀವಾದಿಯಾದ ಭಾಷ್ಯಂ ಹಿಂಸೆಯ ಮಾರ್ಗದತ್ತ ಎಂದೂ ಕಣ್ಣು ಕೂಡ ಹಾಯಿಸಿದವರಲ್ಲ. ಸತ್ಯಾಗ್ರಹದ ಮೊಟ್ಟಮೊದಲ ಹಾಗೂ ಅತ್ಯಂತ ಮೂಲಭೂತವಾದ ಹೆಜ್ಜೆಯೆಂದರೆ ಜನಜಾಗ್ರತಿ ಎನ್ನುವುದು ಭಾಷ್ಯಂ ಅವರ ನಿಲುವು. ನೇತಾರರು ಹಾಕಿಕೊಟ್ಟ ದಾರಿಯಲ್ಲಿ ಸಹವರ್ತಿಗಳು ನಡೆದಾಗಲಷ್ಟೆ ಸತ್ಯಾಗ್ರಹ ಅಥವಾ ಇನ್ನುಳಿದ ಯಾವುದೇ ಸಾಮಾಜಿಕ ಚಳವಳಿ ತನ್ನ ಗುರಿ ಸಾಧಿಸಲು ಸಾಧ್ಯ ಎಂದವರು ಭಾಷ್ಯಂ.

ಈ ವಿಚಾರವನ್ನು ಸಮರ್ಥಿಸಿ ಅನೇಕ ಉದಾಹರಣೆಗಳನ್ನು ನೀಡಬಹುದಾದರೂ ಇಲ್ಲಿ ನಾನು ಒಂದೆರಡನ್ನಷ್ಟೆ ಕೊಡುತ್ತಿದ್ದೇನೆ. ಜೂನ್ ೧೯೩೧ರಲ್ಲಿ, ಜವಾಹರಲಾಲ್ ನೆಹರೂ ಅವರ ಬೆಂಗಳೂರಿನ ಪ್ರವಾಸದ ಸಮಯದಲ್ಲಿ, ಪೋಲೀಸರು ಮುರಿದು ಕೆಡವಿಹಾಕಿದ ರಾಷ್ಟ್ರೀಯ ಧ್ವಜ ಸ್ಥಂಭದ ಕುರಿತು ಭಾಷ್ಯಂ ಗಾಂಧೀಜಿಯವರಿಗೆ ಬರೆದ ಪತ್ರದ ಈ ಕೆಲವು ಸಾಲುಗಳನ್ನು ನೋಡಿ.

" The public feeling all over the State is so intense that they resent our act in withholding even for a short time the rehoisting the National Flag. Thousands of people are ready to face the issue and suffer to maintain the honours of the National Falg. As responsible workers we felt it our duty to consult you and abide by your decision."

(ಜನಸಾಮಾನ್ಯರ ಭಾವನೆಯು ರಾಜ್ಯದ ತುಂಬೆಲ್ಲ ಎಷ್ಟು ತೀವ್ರತಮವಾಗಿದೆಯೆಂದರೆ ನಾವು ರಾಷ್ಟ್ರ ಧ್ವಜ ಆರೋಹಣದ ಕೆಲಸವನ್ನು ತುಸು ಸಮಯದ ಮಟ್ಟಿಗೆ ತಡೆ ಹಿಡಿದರೂ ಕೂಡ ಅವರು ಖಂಡಿತಕ್ಕೂ ಬೇಸರಿಸುತ್ತಾರೆ. ರಾಷ್ಟ್ರ ಧ್ವಜದ ಗೌರವವನ್ನು ರಕ್ಷಿಸಲು ಸಾವಿರಾರು ಜನ ತೊಂದರೆಯನ್ನು ಅನುಭವಿಸಲು ಸಿದ್ಧವಾಗಿದ್ದಾರೆ. ಜವಾಬ್ದಾರಿಯುತ ಸತ್ಯಾಗ್ರಹಿಗಳಾಗಿ ನಿಮ್ಮ ಅಭಿಪ್ರಾಯವನ್ನು ಕೇಳುವುದು ನಮ್ಮ ಕರ್ತವ್ಯವೆಂದು ನಾವು ಭಾವಿಸಿದ್ದೇವೆ ಮತ್ತು ನಿಮ್ಮ ನಿರ್ಣಯದಿಂದ ಬಂಧಿಸಲ್ಪಡುತ್ತೇವೆ).

ರಾಷ್ಟ್ರೀಯ ನೇತಾರರ ಕುರಿತು ಭಾಷ್ಯಂ ಅವರಿಗೆ ಎಲ್ಲಿಲ್ಲದ ಗೌರವ ಹಾಗೂ ಭಕ್ತಿ. ಗಾಂಧೀಜಿಯವರ ಕುರಿತಂತೂ ಅವರಿಗೆ ಹೇಳಲಸದಳ ಶ್ರದ್ಧೆ, ಒಮ್ಮೆ ಮಹಾತ್ಮರು ಬೆಂಗಳೂರಿಗೆ ಬಂದಿದ್ದಾಗ ಅವರ ಬೀಳ್ಕೊಡಿಗೆಗೆಂದು ಭಾಷ್ಯಂ ಅಯ್ಯಂಗಾರ್ ಅವರು ರೈಲು ನಿಲ್ದಾಣಕ್ಕೆ

ಶ್ರೀರಾಮನ ಅಪರಾವತಾರ ಎಂದು ಧೃಡವಾಗಿ ನಂಬಿದ್ದ ಭಾಷ್ಯಂ ತಾನು ಭರತನೆಂದು ಹೇಳಿ ಮಹಾತ್ಮರ ಚಪ್ಪಲಿಗಳನ್ನು ಬೇಡಿದರು. ಅವರ ಭಾವನಾತ್ಮಕ ಹಾಗೂ ಶ್ರದ್ಧಾಪೂರ್ಣ ಮನಸ್ಸಿನಿಂದ ಪ್ರಭಾವಿತರಾದ ಗಾಂಧೀಜಿಯವರು ಅತ್ಯಂತ ಸಂತೋಷದಿಂದ ತಮ್ಮ ಚಪ್ಪಲಿಗಳನ್ನು ಭಾಷ್ಯಂ ಅವರಿಗೆ ಎತ್ತಿಕೊಟ್ಟರು. ತಕ್ಷಣವೇ ಭಾಷ್ಯಂ ಆ ಚಪ್ಪಲಿಗಳನ್ನು ತಮ್ಮ ತಲೆಯ ಮೇಲಿಟ್ಟುಕೊಂಡು ಕಾಂಗ್ರೆಸ್ಸಿನ ಮತ್ತು ಗಾಂಧೀಜಿಯವರ ಜಯಕಾರಮಾಡುತ್ತ ರೈಲು ನಿಲ್ದಾಣದ ತುಂಬೆಲ್ಲ ತಮ್ಮ ಸಂಗಾತಿಗಳೊಂದಿಗೆ ಕುಣಿದಾಡಿದರು. ನಂತರ ಆ ಚಪ್ಪಲಿ ಜೊತೆಯನ್ನು ಮೈಸೂರು ಕಾಂಗ್ರೆಸ್ ಕಚೇರಿಗೆ ತಂದಿಟ್ಟು ಅವುಗಳ ಮೇಲೆ ಹೂಗಳನ್ನೇರಿಸಿ ಪೂಜಿಸಿದರು. ಇದು ಭಾಷ್ಯಂ ಗಾಂಧೀಜಿಯವರನ್ನು ಪ್ರೀತಿಸಿದ, ಪೂಜಿಸಿದ ಪರಿ.

ಇದೇ ರೀತಿ ಏಪ್ರಿಲ್ ೧೯೪೦ ರಲ್ಲಿ ಶಿವಮೊಗ್ಗಾದಲ್ಲಿ ನಡೆದ ಮೂರನೆಯ ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿ ಭಾಷ್ಯಂ ಮಾಡಿದ ಭಾಷಣದಲ್ಲಿ ಅವರು ಗಾಂಧೀಜಿಯವರನ್ನು ತಮ್ಮ ನೇತಾರರಾಗಿ ಹಾಗೂ ಗುರುಗಳಾಗಿ ಒಪ್ಪಿಕೊಂಡಿದ್ದನ್ನು ಒತ್ತಿ ಹೇಳಿದ್ದಾರೆ. ಅದೇ ರೀತಿ ಸತ್ಯಾಗ್ರಹಿಗಳ ಕರ್ತವ್ಯ, ಅವರ ಮೇಲಿರುವ ಗುರುತರ ಜವಾಬ್ದಾರಿಗಳ ಬಗ್ಗೆಯೂ ಅತ್ಯಂತ ಮಾರ್ಮಿಕ ರೀತಿಯಲ್ಲಿ ಚರ್ಚಿಸಿದ್ದಾರೆ. ಮೈಸೂರು ಪ್ರಾಂತದ ಸಂದರ್ಭದಲ್ಲಿ ತಾವೆಲ್ಲರೂ ಕೆಲಸ ಮಾಡುತ್ತಿದ್ದರೂ ಕೂಡ ಮೈಸೂರಿನ ಸ್ವಾತಂತ್ರ್ಯ ದೇಶದ ಸ್ವಾತಂತ್ರ್ಯ ಹೋರಾಟದ ಒಂದು ಅವಿಭಾಜ್ಯ ಅಂಗ ಎಂದರೆ ಇಡೀ ದೇಶವು ಸ್ವತಂತ್ರವಾದಾಗಲಷ್ಟೇ ಮೈಸೂರಿನಲ್ಲಿ ಪ್ರಜಾಪ್ರಭುತ್ವದ 'ಜವಾಬ್ದಾರಿ ಸರಕಾರ'ದ ರಚನೆಗೆ ಅರ್ಥ ಬರಲು ಸಾಧ್ಯ ಎಂದು ಭಾಷ್ಯಂ ದೃಢವಾಗಿ ನಂಬಿ ಕೆಲಸ ಮಾಡಿದರು.

ಭಾಷ್ಯಂ ಸಾಮಾನ್ಯವಾಗಿ ಮೃದುಭಾಷಿ. ಹಾಸ್ಯರಸ ಅವರ ಸಂಭಾಷಣೆಯಲ್ಲಿ, ಭಾಷಣದಲ್ಲಿ ಹಾಗೂ ಚರ್ಚೆಗಳಲ್ಲಿ ತಾನೇತಾನಾಗಿ ಮೈದೋರುತ್ತದೆ. ಎಂಥ ಗಂಭೀರ ಚರ್ಚೆಯೇ ಆಗಿರಲಿ ಅಥವಾ ಎಂಥ ಕಾವೇರಿದ ವಾತಾವರಣವೇ ಇರಲಿ ಭಾಷ್ಯಂ ತಮ್ಮ ಲಘು ಹಾಸ್ಯ ಪ್ರವೃತ್ತಿಯಿಂದ ಅವನ್ನು ತಿಳಿಗೊಳಿಸಬಲ್ಲವರು. ಹಾಗಿದ್ದರೂ ತಮ್ಮ ವಿಚಾರಗಳನ್ನು ಮಾತ್ರ ಅವರು ಬಿಟ್ಟುಕೊಟ್ಟವರಲ್ಲ. ಇದರಿಂದಾಗಿ ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದ ಎಲ್ಲ ಮಹತ್ವದ ಮಾತುಕಥೆಗಳು ಹಾಗೂ ಸಂಧಾನಗಳಲ್ಲಿ ಭಾಷ್ಯಂ ಅನಿವಾರ್ಯ ಅಂಗವಾಗಿ ಪಾಲ್ಗೊಳ್ಳುತ್ತಿದ್ದರು.

ಭಾಷ್ಯಂ ಅಯ್ಯಂಗಾರ್‌ರ ಹಾಸ್ಯ ಪ್ರವೃತ್ತಿಯನ್ನು ಮೆಚ್ಚದ, ಅವರ ಮಾತಿನ ಚಟಾಕಿಯ ರಸವನ್ನು ಸವಿಯದ ನಮ್ಮಲ್ಲಿ ಅನೇಕರಿಗೆ ಭಾಷ್ಯಂ ಅವರ ಸಮಯ ಸ್ಫೂರ್ತಿ ಹಾಗೂ ಲಾಸ್ಯದ ಗುಣಮಟ್ಟ ಕುರಿತು ಏನು ಹೇಳಿದರೂ ಅತಿಶಯೋಕ್ತಿಯೆಂದೇ ಅನಿಸೀತು. ಆದರೆ ನಿಜಕ್ಕೂ ಅವರ ವಾಕ್ ಚಾತುರ್ಯ ಹಾಗೂ ಜಾಣ್ಮೆ ತುಂಬ ಉನ್ನತ ಮಟ್ಟದ್ದಿದ್ದವೆಂದು ಅವರನ್ನು ಬಲ್ಲ ಅಂದಿನ ಮೈಸೂರು ಕಾಂಗ್ರೆಸ್ಸಿಗರೆಲ್ಲರೂ ಬರೆದಿದ್ದಾರೆ. ಪ್ರಸಿದ್ಧ ಸಾಹಿತಿ ಶ್ರೀ ಗೋರೂರು

ರಾಮಸ್ವಾಮಿ ಅಯ್ಯಂಗಾರ್ ಒಂದು ಕಡೆ ಹೇಳಿದಂತೆ ಎಂಥ ಮಗುಡದ ವಾತಾವರಣವಿರಲಿ, ಅದು ಯಾರದೋ ಮನೆಯಲ್ಲಿರಲಿ, ಅಥವಾ ಯಾವುದೋ ಸ್ವಾತಂತ್ರ್ಯ ಯೋಧರ ಸಭೆಯಿರಲಿ. ಶ್ರೀ ಭಾಷ್ಯಂ ಹೇಗೊ ಸಮಾಧಾನ ಮಾಡಿ ಈ ಸಭೆಯನ್ನು ನಗುವಿನಲ್ಲಿ, ಸಂತೋಷ ಸಾಗರದಲ್ಲಿ ಮುಳುಗಿಸುತ್ತಿದ್ದರು ..... ಅವರ ಮಾತುಗಳೆಂದರೆ ಜೇನುತುಪ್ಪದಲ್ಲಿ ಮುಳುಗಿಸಿಟ್ಟ ಬಾಳೆಹಣ್ಣಿನ ಹಾಗೆ." ಎಸ್.ಸಿ. ಸೂರ್ಯನಾರಾಯಣ ಶೆಟ್ಟಿಯವರಂಥ ಹಿರಿಯ ಸಂಸದೀಯ ಪಟುಗಳೂ ಕೂಡ ಭಾಷ್ಯಂ ಅವರ ಹಾಸ್ಯ ಪ್ರಜ್ಞೆಯ ಕುರಿತು ತಮ್ಮ ಅತ್ಯಂತ ಶ್ಲಾಘನೀಯ ಮೆಚ್ಚುಗೆಯ ಮಾತುಗಳನ್ನು ಆಡಿರುವುದನ್ನು ನಾವು ಕಾಣುತ್ತೇವೆ. ಭಾಷ್ಯಂ ಅವರ ಮರಣದ ನಂತರ ಸೆಪ್ಟೆಂಬರ್ ೨೦, ೧೯೫೬ರಂದು ವಿಧಾನ ಪರಿಷತ್ತಿನಲ್ಲಿ ಅವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುವ ಸಮಯದಲ್ಲಿ ಅವರ ಕುರಿತು ಅಂದಿನ ಸಭಾಪತಿಗಳು ಹೇಳಿದ ಮಾತಿನಂತೆ ಭಾಷ್ಯಂ "ಸತ್ಯಂ ಭ್ರೂಯತ್ ಪ್ರಿಯಂ ಭ್ರೂಯತ್....." (ಸತ್ಯವನ್ನು ಹೇಳಬೇಕು ಆದರೆ ಅದನ್ನು ಪ್ರಿಯವಾಗಿರುವಂತೆ ಹೇಳಬೇಕು) ಎನ್ನುವುದರಲ್ಲಿ ಅಚಲ ವಿಶ್ವಾಸವಿಟ್ಟವರಾಗಿದ್ದರು."

ಒಮ್ಮೆ ೧೯೩೮ರಲ್ಲಿ ಭಾಷ್ಯಂ ಅವರು ಬ್ರಿಟೀಷರ ಬಂಧನಕ್ಕೆ ಒಳಗಾಗಿ ಕೋರ್ಟಿಗೆ ತರಲ್ಪಟ್ಟಾಗ ನಡೆದ ಘಟನೆ. ನ್ಯಾಯಾಧೀಶರು ವಿಚಾರಣೆ ನಡೆಸಿದ ನಾಟಕವಾಡಿ ಅವರಿಗೆ ಮೂರು ತಿಂಗಳ ಶಿಕ್ಷೆ ವಿಧಿಸಿದರು. ನಂತರ ಅವರು ಭಾಷ್ಯಂ ಅವರನ್ನು "ನಿಮಗೆ ಜೈಲು ಶಿಕ್ಷೆ ವಿಧಿಸಲಾಗಿದೆ. ಬೇಕಿದ್ದರೆ ನೀವು ಮನೆಗೆ ಹೋಗಿ ನಿಮ್ಮ ಬಟ್ಟೆ ಬರೆಗಳನ್ನು ತರಬಹುದು" ಎಂದಾಗ ಭಾಷ್ಯಂ "ಬಟ್ಟೆ ಬರೆಗಳು ಮುಖ್ಯವಲ್ಲ. ನನಗೆ ಅತಿ ಅಗತ್ಯವಾಗಿ ಮನೆಗೆ ಹೋಗಿ ನನ್ನ ಹೆಂಡತಿಯನ್ನು ಭೇಟಿಯಾಗಿ ಬರಬೇಕಾಗಿದೆ" ಎಂದು ನುಡಿದು ಕೋರ್ಟಿನಲ್ಲಿದ್ದ ಎಲ್ಲರನ್ನೂ ನಗೆಗಡಲಿನಲ್ಲಿ ತೇಲಿಸಿದರು. "ಭಾಷ್ಯಂ ಅವರ ಸಂಪರ್ಕದಲ್ಲಿ ಬಂದ ಯಾರೇ ಆಗಿದ್ದರೂ, ಎಂಥ ಸಂಕಷ್ಟದಲ್ಲಿದ್ದರೂ ಅವರೊಂದಿಗೆ ಕೆಲವು ಕ್ಷಣ ಕಳೆದರೆ ಹಗುರವಾದ ಹೃದಯದಿಂದ, ಉಲ್ಲಸಿತ ಮನಸ್ಸಿನೊಡನೆ ಹಿಂದಿರುಗುತ್ತಿದ್ದರು" (Every person that came in contact with him went out with a lighter heart and with a free mind, and that was Shri. K.T. Bhashyam) ಎಂಬ ಶ್ರೀ ರಾಮಚಂದ್ರ ರಾವ್ ಅವರ ಮಾತನ್ನು ಇಲ್ಲಿ ನಾವು ಸ್ಮರಿಸಬಹುದು. ಯಾರು ಯಾವುದೇ ಸಮಸ್ಯೆಗಳನ್ನು ತಂದರೂ ಮುಗುಳುನಗೆಯೊಂದಿಗೆ ಅವರನ್ನು ಸ್ವೀಕರಿಸುತ್ತಿದ್ದ ಭಾಷ್ಯಂ ಅವರ "Right", "All Right" ಹಾಗೂ "O.K." ಶಬ್ದಗಳು ಎದುರಿಗಿದ್ದವರ ಸಮಸ್ಯೆಯನ್ನು ಅಷ್ಟರಲ್ಲಿಯೇ ಅರ್ಧದಷ್ಟು ಪರಿಹರಿಸಿಬಿಡುತ್ತಿದ್ದವು ಎಂದು ಎ. ಎನ್. ರಾಮರಾವ್ ಹೇಳಿರುವುದರಲ್ಲಿಯೂ ನೂರಕ್ಕೆ ನೂರು ಸತ್ಯವಿದೆಯೆನಿಸುತ್ತದೆ.

ಕೆ.ಟಿ. ಭಾಷ್ಯಂ ಅವರ ಅಮೋಘ ಮಾತುಗಾರಿಕೆಯ ಹಾಗೂ ಭಾಷಣಗಳ ವಿಚಾರದಲ್ಲಿ ಎಷ್ಟು ಬರೆದರೂ ಕಡಿಮೆಯೇ ಎನಿಸುತ್ತದೆ. ಈ ವಿಷಯ ಕುರಿತು ಅವರ ಎಲ್ಲ ಸಹವರ್ತಿಗಳು ಉತ್ಪ್ರೇಕ್ಷೆ ಎನಿಸುವಷ್ಟರ ಮಟ್ಟಿಗೆ ಮೆಚ್ಚಿ ಬರೆದಿದ್ದಾರೆ. ಕರ್ನಾಟಕ ರತ್ನ, ರಾಷ್ಟ್ರ ನಾಯಕ, ಮಾಜಿ ಮುಖ್ಯ ಮಂತ್ರಿಗಳಾದ ಶ್ರೀ ಸಿದ್ದವನ ಹಳ್ಳಿ ನಿಜಲಿಂಗಪ್ಪನವರು ಭಾಷ್ಯಂ ಅವರ ಮಾತುಗಾರಿಕೆಯ ಬಗ್ಗೆ ಬರೆಯುತ್ತ "ಬಹಿರಂಗ ಸಭೆಯಲ್ಲಿ ಶ್ರೀ ಕೆ. ಟಿ. ಭಾಷ್ಯಂರವರ ಭಾಷಣ ಎಂದರೆ ಆ ಸಾಯಂಕಾಲ ಈ ಗೊತ್ತಾದ ಸ್ಥಳಗಳಲ್ಲಿ ಸಾವಿರಾರು ಜನರು, ಸಮಯಕ್ಕೆ ಮೊದಲೇ ಕಿಕ್ಕಿರಿದು ತುಂಬಿರುತ್ತಿದ್ದರು. ಭಾಷ್ಯಂ ಅಯ್ಯಂಗಾರರ ಭಾಷಣವೆಂದರೆ ಜನಗಳಿಗೆ ಅಷ್ಟು ಅಚುಮೆಚ್ಚು, ಅಷ್ಟು ಸೊಗಸು. ಜನಪ್ರಭಾವಿತರಾಗುತ್ತಿದ್ದುದು ಭಾಷ್ಯಂ ಅವರ ಭಾಷಣದ ಪರಿಣಾಮ. ಅವರಂತೆ ಮಾತನಾಡಬಲ್ಲ ಕಾಂಗ್ರೆಸ್ ಮುಖಂಡರುಗಳು ಚಂಗಲ್ ರಾಯರೆಡ್ಡಿ, ಟಿ. ಸುಬ್ರಮಣ್ಯಂ, ಹೆಚ್. ಸಿದ್ದಯ್ಯ, ಕೆ. ಪಟ್ಟಾಭಿರಾಮನ್, ಟಿ. ಸಿದ್ದಲಿಂಗಯ್ಯ ಮುಂತಾದವರು. ಆದರೆ ಭಾಷ್ಯಂ ಅವರಿಗೆ ಪ್ರಥಮ ಪಟ್ಟ."

ಭಾಷ್ಯಂ ಅವರ ಪ್ರಚಂಡ ವಾಕ್ಪಟುತ್ವವನ್ನು ಜಗನ್ಮೋಹನ ಅರಮನೆಯಲ್ಲಿ, ಮೈಸೂರು ಕಾಂಗ್ರೆಸ್ಸಿನ ಪ್ರಜಾಪ್ರತಿನಿಧಿ ಸಭೆಗಳ ಸಂದರ್ಭಗಳಲ್ಲಿ ರಾಜ್ಯದ ಉದ್ದಗಲಕ್ಕೆ ಹಾಗೂ ರಾಷ್ಟ್ರದ ಅನೇಕ ಸ್ಥಳಗಳಲ್ಲಿ ಅಂದಿನ ಜನ ಕೇಳಿ ಆನಂದಿಸಿದ್ದಾರೆ. ಮಾತುಗಾರಿಕೆಯೆಂದರೆ ಕೇವಲ ಭಾಷಾ ಸೌಂದರ್ಯವಷ್ಟೇ ಅಲ್ಲ; ಅಥವಾ ಕ್ಲಿಷ್ಟ ಶಬ್ದ ಮತ್ತು ಪರಿಕಲ್ಪನೆಗಳ ರಾಶಿಯೆಂದಲ್ಲ. ಅವರ ಹತ್ತಿರದ ವ್ಯಕ್ತಿಯೊಬ್ಬರು ಹೇಳಿದಂತೆ "ಶ್ರೀ ಭಾಷ್ಯಂರವರ ಭಾಷಣವನ್ನು ಕೇಳುವದಕ್ಕೆ ಜನರು ಕಾತುರರಾಗಿರುತ್ತಿದ್ದರು. ಅವರು ಭಾಷಣ ಮಾಡುತ್ತಿದ್ದರೆಂದರೆ ಸಭೆಯಲ್ಲಿ 'ಪಿನ್ ಡ್ರಾಪ್ ಸೈಲೆನ್ಸ್' ಇರುತ್ತಿತ್ತು. ಅಧಿಕಾರ ವರ್ಗದವರೂ ಕೂಡ ಅನೇಕರು ಅವರ ಭಾಷಣಗಳನ್ನು ಕೇಳಿ ಮುಗ್ಧರಾಗಿ ಹೋಗುತ್ತಿದ್ದರೆಂದರೆ ಅತಿಶಯೋಕ್ತಿಯಲ್ಲ. ಅಂಥ ಶಕ್ತಿ ಅವರಲ್ಲಿತ್ತು. ಅಂಥ ವ್ಯಕ್ತಿಗಳು ಈಗ ವಿಶಾಲ ಮೈಸೂರಾಗುವ ಕಾಲದಲ್ಲಿ ಇದ್ದಿದ್ದರೆ ದೇಶಕ್ಕೆ ಬಹಳ ಉಪಕಾರವಾಗುತ್ತಿತ್ತು. "ಶ್ರೀ ಎ. ಜಿ. ರಾಮಚಂದ್ರ ರಾವ್ ಅವರು ಹೇಳಿದಂತೆ ಭಾಷ್ಯಂ ಜನ್ಮ ಜಾತ ನೇತಾರರಾಗಿದ್ದರು." (He was a born leader) ಅವರ ಭಾಷಣದ ಪ್ರತಿಭೆ ಅತ್ಯಂತ ಅಮೋಘವಾಗಿತ್ತು ಎಂಬುದು ಈ ಎಲ್ಲ ಹೇಳಿಕೆಗಳಿಂದ ಸ್ಪಷ್ಟವಾಗುತ್ತದೆ.

## ಗ್ರಂಥಋಣ

೧. Manor, James 'Political Change in an Indian State: Mysore 1917-1955', New Delhi. Manohar 1977, p. 56, 76, pp. 100-101, p. 208 (Note 37).

೨. ನಾರಾಯಣ ರಾವ್, ವಿ. ಎಸ್. 'ಸ್ವಾತಂತ್ರ್ಯ ಸೇನಾನಿ ಕೆ.ಟಿ. ಭಾಷ್ಯಂ ಅಯ್ಯಂಗಾರ್,' ಬೆಂಗಳೂರು, ಅಖಿಲ ಭಾರತ ಸ್ವಾತಂತ್ರ್ಯ ಹೋರಾಟಗಾರರ ಸಮಿತಿ, ಕರ್ನಾಟಕ ಶಾಖೆ, ೧೯೯೧.

೩. ಕಾಮತ್ ಸೂರ್ಯನಾಥ (ಸಂ), 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' (ದ್ವಿತೀಯ ಸಂಪುಟ), ಮೈಸೂರು, ಗೀತಾ ಬುಕ್ ಹೌಸ್, ೧೯೭೭.

೪. The Mysore Legislative Council Debates, Official Report, Third Session of the First Legislative Council. Vol. III, part I & II, 1953. Also refer Vol. II, 1952.

೫. 'ಸ್ವಾತಂತ್ರ್ಯದೆಡೆಗೆ' (ಎಂ. ಎನ್. ಜೋಯಿಸ್ ಅಭಿನಂದನ ಗ್ರಂಥ), ಮೈಸೂರು, ಡಿ.ವಿ.ಕೆ. ಮೂರ್ತಿ.

೬. ಜವರಪ್ಪ ಗೌಡ, ಪಿ. ಎನ್. 'ಶಿವಪುರ ಧ್ವಜ ಸತ್ಯಾಗ್ರಹ,' ಬೆಂಗಳೂರು, ಸಾಹಿತ್ಯ ಮಂದಿರ, ೧೯೯೬.

೭. Bhashyam K.T. 'How Mysore Won Responsible Government, Bangalore, Kataka Advertising, 1951.

೮. Bhashyam K.T. 'The Rights of Women in India', Bangalore, 1928.

೯. Halappa, G.S. 'History of Freedom Movement in Karnataka' (Vol. II), Bangalore, Government of Mysore, 1964.

೧೦. ಆರಾಧ್ಯ ಆರ್. ಎಸ್. 'ಮೈಸೂರು ಕಾಂಗ್ರೆಸ್‌ನ ಮುಂದಾಳುಗಳು,' ತುಮಕೂರು, ೧೯೭೩.

೧೧. Hettne, Bjorn, 1978: the Political Economy of Indirect Rule: Mysore 1881 - 1947, Ambika Publications, New Delhi.

---

ಮುದ್ರಕರು: ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಮುದ್ರಣಾಲಯ, ಬೆಂಗಳೂರು-1. ಕಾಸೂ-2176